KA / BG-GPO/2515/WPP-47/2006-2008




# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಏಪ್ರಿಲ್ ೨೦, ೨೦೦೬ (ಚೈತ್ರ ೩೦ ಶಕವರ್ಷ ೧೯೨೮) | ಸಂಚಿಕೆ ೧೬ |
|---|---|---|


## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಜಲ ಸಂಪನ್ಮೂಲ ಇಲಾಖೆ**

**ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ**

**ಅಲ್ಪಾವಧಿ ಟೆಂಡರ್ ಪ್ರಕಟಣೆ : 2005-06**

**ಸಂಖ್ಯೆ: ಬಿಡಿಯನ್-4 ಪಿ.ಬಿ-4:ಟೆಂಡರು ಪ್ರಕಟಣೆ:2005-06/3159/11, ದಿನಾಂಕ: 17ನೇ ಮಾರ್ಚ್ 2006**

**ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲ್ಲೂಕು, ಅಂಜನಾಪುರ ಮತ್ತು ಅಂಬ್ಲಿಗೊಳ ಯೋಜನೆಯಡಿಯ ಅಭಿವೃದ್ಧಿ ಕಾಮಗಾರಿಗಳು**

ಮೊಹರಾದ ಶೇಕಡವಾರು ಟೆಂಡರ್‌ಗಳನ್ನು ನಿಗದಿತ ನಮೂನೆಯಲ್ಲಿ ದ್ವಿಪ್ರತಿಗಳಲ್ಲಿ ಈ ಕೆಳಕಾಣಿಸಿರುವ ಕಾಮಗಾರಿಗಳಿಗೆ ನೊಂದಾಯಿಸಲ್ಪಟ್ಟಿರುವ ಅರ್ಹ ಗುತ್ತಿಗೆದಾರರಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ 2000ರ ಅನ್ವಯ ಕರ್ನಾಟಕ ರಾಜ್ಯಪಾಲರ ಪರವಾಗಿ ಕಾರ್ಯಪಾಲಕ ಇಂಜಿನಿಯರ್, ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ ಇವರಿಂದ ಆಹ್ವಾನಿಸಲಾಗಿದೆ.

ತುಂಬಲಾದ ಟೆಂಡರ್‌ಗಳನ್ನು ದಿನಾಂಕ: 20.4.2006 ಸಂಜೆ 4.00 ಗಂಟೆಗೆ ಈ ಕಛೇರಿಯಲ್ಲಿ ಸ್ವೀಕರಿಸಲಾಗುವುದು. ಹಾಗೂ ಟೆಂಡರ್‌ಗಳನ್ನು ಸಾಧ್ಯವಾದಲ್ಲಿ ಅದೇ ದಿನ ಸಂಜೆ 4.30 ಗಂಟೆಗೆ ಅಥವಾ ಇನ್ನಾವುದೇ ದಿನದಂದು ಕಛೇರಿಯಲ್ಲಿ ಹಾಜರಿರುವ ಟೆಂಡರ್‌ದಾರರ ಅಥವಾ ಇನ್ನಾವುದೇ ನೋಂದಾಯಿತ ಗುತ್ತಿಗೆದಾರರ ಸಮಕ್ಷಮದಲ್ಲಿ ತೆರೆಯಲಾಗುವುದು.

| | | |
|---|---|---|
| 1 | ನಿಗದಿತ ಖಾಲಿ ಟೆಂಡರ್ ಫಾರಂಗಳನ್ನು ಕೋರಿ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕ: | 18.04.2006 ಸಂಜೆ 5.30 ಗಂಟೆವರೆಗೆ |
| 2 | ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ | 19.04.2006 ಸಂಜೆ 5.30 ಗಂಟೆವರೆಗೆ |
| 3 | ತುಂಬಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ | 20.04.2006 ಸಂಜೆ 4.00 ಗಂಟೆವರೆಗೆ |
| 4 | ಕೆಲಸವನ್ನು ಮುಗಿಸುವ ಅವಧಿ | ಎರಡು ತಿಂಗಳು |
| 5 | ಟೆಂಡರ್ ಕರೆ | ಒಂದನೇ ಕರೆ |

ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು. ಟೆಂಡರ್‌ನಲ್ಲಿ ಸೂಚಿಸಿರುವ ದಿನಾಂಕಗಳು ರಜಾ ದಿನವೆಂದು ಘೋಷಿಸಲ್ಪಟ್ಟರೆ ಮುಂದಿನ ಕೆಲಸದ ದಿನವನ್ನು ಟೆಂಡರಿನಲ್ಲಿ ತಿಳಿಸಿದ ದಿನಾಂಕದ ಬದಲಾಗಿ ಪರಿಗಣಿಸಲಾಗುವುದು.

| ಕ್ರ. ಸಂ. | ಕೆಲಸದ ಹೆಸರು | ಟೆಂಡರ್‌ಗೆ ಇಡಲಾದ ಮೊತ್ತ | ಇ.ಎಂ.ಡಿ. | ಟೆಂಡರ್ ಫಾರಂ ಬೆಲೆ (ತೆರಿಗೆಗಳು ಪ್ರತ್ಯೇಕ) ಹಿಂದಿರುಗಿಸಲಾರದ ಮೊತ್ತ | ಗುತ್ತಿಗೆದಾರರ ದರ್ಜೆ |
|---|---|---|---|---|---|
| 1 | 2 | 3 | 4 | 5 | 6 |
| | **ಅಂಜನಾಪುರ ಜಲಾಶಯ ಯೋಜನೆ** | | | | |
| 1 | ಅಂಜನಾಪುರ ಯೋಜನೆ ಬಲದಂಡೆ ನಾಲೆಗೆ ಅಡ್ಡವಾಗಿ ಚೈನೇಜ್ 17.00 ಕಿ.ಮೀ. ನಲ್ಲಿ ಸೇತುವೆಯ ಪುನರ್ ನಿರ್ಮಾಣ | 4,99,500 | 12,500/- | 500/- | ಮೂರನೇ ದರ್ಜೆ ಮತ್ತು ಮೇಲ್ಪಟ್ಟು |
| 2 | ಅಂಜನಾಪುರ ಯೋಜನೆಯ ಬಲದಂಡೆ ನಾಲೆಯ 22ನೇ ಉಪಕಾಲುವೆಯ ಅಭಿವೃದ್ಧಿ ಮತ್ತು ಲೈನಿಂಗ್ ಮಾಡುವುದು | 4,99,500 | 12,500/- | 500/- | - " - |

| 1 | 2 | 3 | 4 | 5 | 6 |
|---|---|---|---|---|---|
| 3 | ಅಂಜನಾಪುರ ಯೋಜನೆಯ ಬಲದಂಡೆ ನಾಲೆಯಡಿ ಈಸೂರು-ಗಾಮ ಗ್ರಾಮಗಳ ಸಮೀಪ ರಸ್ತೆ ಕಲ್ವರ್ಟ್ ಅಭಿವೃದ್ಧಿ | 2,99,800 | 7,500/- | 300/- | - " - |
| 4 | ಅಂಜನಾಪುರ ಯೋಜನೆಯ ಬಲದಂಡೆ ನಾಲೆಗೆ ಸಂಕ್ಲಾಪುರ ಗ್ರಾಮ ಸಮೀಪ ರಿವಿಟ್‌ಮೆಂಟ್ ನಿರ್ಮಾಣ | 4,99,600 | 12,500/- | 500/- | - " - |
| | **ಅಂಬ್ಲಿಗೊಳ ಜಲಾಶಯ ಯೋಜನೆ** | | | | - " - |
| 5 | ಅಂಬ್ಲಿಗೊಳ ಜಲಾಶಯ ಯೋಜನೆಯ ಸ್ಪಿಲ್‌ವೇಯ ಮೇಲ್ಭಾಗ ಮತ್ತು ಕೆಳಭಾಗದಲ್ಲಿ ಗೈಡ್‌ವಾಲುಗಳ ಅಭಿವೃದ್ಧಿ | 1,99,800 | 5,000/- | 300/- | - " - |

**ಸೂಚನೆಗಳು:**

1) ನಿಗದಿತ ಟೆಂಡರ್ ಫಾರಂನಲ್ಲಿ ಕಾಮಗಾರಿಯ ವಿವರಗಳನ್ನು ಮತ್ತು ಟೆಂಡರಿನ ಷರತ್ತುಗಳನ್ನು ಒದಗಿಸಲಾಗಿದೆ. ಟೆಂಡರುದಾರರು ಹಾಕುವಾಗ ಪಾಲಿಸಬೇಕಾಗಿರುವ ನಿಬಂಧನೆಗಳನ್ನು ಸಹ ಒದಗಿಸಲಾಗಿದೆ. ಅದರಂತೆ ಟೆಂಡರ್ ಹಾಕಬೇಕು.
2) ಇ.ಎಂ.ಡಿ. ಮೊತ್ತವನ್ನು ಡಿಮ್ಯಾಂಡ್ ಡ್ರಾಫ್ಟ್, ಬ್ಯಾಂಕರ್ಸ್ ಚೆಕ್, ಎಫ್.ಡಿ.ಆರ್. ಟಿ.ಡಿ.ಆರ್ ಮತ್ತು ಬ್ಯಾಂಕ್ ಗ್ಯಾರಂಟಿಗಳನ್ನು ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ಮಾತ್ರ ಸೂಚಿಸಿರುವ ಮೊತ್ತಕ್ಕೆ ಕಾರ್ಯಪಾಲಕ ಇಂಜಿನಿಯರ್ ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ ಭದ್ರಾವತಿ ಇವರ ಹೆಸರಿನಲ್ಲಿ ಪಾವತಿಸಿರಬೇಕು. ನ್ಯಾಷನಲ್ ಸೇವಿಂಗ್ಸ್ ಸರ್ಟಿಫಿಕೇಟನ್ನು ಕಾರ್ಯಪಾಲಕ ಇಂಜಿನಿಯರ್ ಹೆಸರಿನಲ್ಲಿ ಪ್ಲೆಡ್ಜ್ ಮಾಡಿರಬೇಕು. ತಪ್ಪಿದಲ್ಲಿ ಅಂತಹ ಟೆಂಡರುಗಳನ್ನು ತಿರಸ್ಕರಿಸಲಾಗುವುದು.
3) ಯಾವುದೇ ನಿಬಂಧನೆಗಳನ್ನು ಒಳಗೊಂಡ ಟೆಂಡರುಗಳನ್ನು ಒಪ್ಪಿಕೊಳ್ಳಲಾಗುವುದಿಲ್ಲ.
4) ಇ.ಎಂ.ಡಿ. ಯ ಠೇವಣಿ ಕ್ರಮಬದ್ಧತೆಯು (ವ್ಯಾಲಿಡಿಟಿಪೀರಿಯಡ್) ತೊಂಭತ್ತು ದಿನಗಳ ಅವಧಿಯನ್ನು ಒಳಗೊಂಡಿರಬೇಕಾಗಿರುತ್ತದೆ.
5) ಇತ್ತೀಚಿನ ಸೇಲ್ ಟ್ಯಾಕ್ಸ್ ಕ್ಲಿಯರೆನ್ಸ್ ಸರ್ಟಿಫಿಕೇಟನ್ನು ಅರ್ಜಿಯೊಂದಿಗೆ ಸಲ್ಲಿಸಬೇಕು.
6) ಟೆಂಡರನ್ನು ಯಾವುದೇ ಕಾರಣವಿಲ್ಲದ ಮುಂದೂಡುವ ಸ್ವೀಕರಿಸುವ, ತಿರಸ್ಕರಿಸುವ ಅಧಿಕಾರವು ಕಾರ್ಯಪಾಲಕ ಇಂಜಿನಿಯರ್ ಇವರಿಗೆ ಇರುತ್ತದೆ.
7) ಇಲಾಖಾವತಿಯಿಂದ ಯಾವುದೇ ಕಾಮಗಾರಿ ನಿರ್ಮಾಣ ವಸ್ತುಗಳನ್ನು ವಿತರಿಸಲಾಗುವುದಿಲ್ಲ. ಗುತ್ತಿಗೆದಾರರೇ ಸ್ವಂತ ಏರ್ಪಾಟು ಮಾಡಿಕೊಳ್ಳತಕ್ಕದ್ದು.
8) ಜೇಷ್ಟತೆಯ ಆಧಾರದ ಮೇಲೆ ಗುತ್ತಿಗೆದಾರರ ಬಿಪತ್ರಗಳನ್ನು ಪಾವತಿಸಲಾಗುವುದು.
9) ಖಾಲಿ ಟೆಂಡರ್ ಪುಸ್ತಕವನ್ನು ಖರೀದಿಸಿ ಕ್ರಮಬದ್ಧವಾಗಿ ಟೆಂಡರ್ ಹಾಕದೇ ಇದ್ದ ಮತ್ತು ಮೂರು ಬಾರಿ ಪುನರಾವರ್ತನೆ ಮಾಡಿದ ಗುತ್ತಿಗೆದಾರರು ಮುಂದಿನ ಟೆಂಡರ್‌ಗೆ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.
10) ಕಾಮಗಾರಿಯನ್ನು ನೀರು ನಿಲ್ಲಿಸಿದ ಅವಧಿಯಲ್ಲಿಯೇ ಪೂರ್ಣಗೊಳಿಸಬೇಕು ಹಾಗೂ ಕಾಮಗಾರಿಗೆ ಅಗತ್ಯವಿರುವ ಸಾಮಗ್ರಿ ಮತ್ತು ಯಂತ್ರೋಪಕರಣಗಳನ್ನು ನೀರು ನಿಲ್ಲಿಸುವ ಮುಂಚೆಯೇ ಮುಂಗಡವಾಗಿ ವ್ಯವಸ್ಥೆ ಮಾಡಿಕೊಳ್ಳಬೇಕು.

**ಎಸ್.ಹೆಚ್. ಮಂಜಪ್ಪ**

ಪಿ.ಆರ್. 186 ಕಾರ್ಯಪಾಲಕ ಅಭಿಯಂತರರು, ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ.

**OFFICE OF THE EXECUTIVE ENGINEER, PWD SHIMOGA DIVISION, SHIMOGA**
**SHORT TERM TENDER NOTIFICATION (Two Cover System)**
**No. EE/PWD/SMG/AE-2/TND-38/2005-06/5030, Dated: 23rd March 2006**

Sealed Item rate tenders in duplicate in Two covers are invited from the Registered KPWD/ CPWD/MES Contractors for the work noted below and will be received by the undersigned in this office upto 4.30 pm (IST) on the date noted below subject to the condition laid down in form No.PWG-65, KPWD code Vol-II and Karnataka Transparency in Public Procurement Ordinance-2000. The Tenders (Cover-I) will be opened by the undersigned at his office at 5.00 pm on the same day if possible. Otherwise, on the next working day.

The tender documents can be had from this office of application and payment noted in Col.No.5 (not refundable). The tender documents will be issued subject to the conditions there-of to the intending contractors on the date noted below between 10.00 am to 5.30 pm (except 1.30 to 2.15 pm) on all working days in this office.

| Sl. No. | Name of the Work | Approximate amount of Estimate put to tender in Rs. | E.M.D. to be paid in Rs. | Cost of tender documents (not Refund) able) | Class of contractors eligible | Time for completion of work |
|---|---|---|---|---|---|---|
| 1 | Improvement and Asphalting to Tumkur-Honnavar road (SH-68) in Shimoga City limit (KM No 203.80 to 206.40) | Rs.430,00,000 | Rs.4,30,000 | Rs.11,000 | Class-1 | 12 Months including Rainy season |

| | |
|---|---|
| Last Date of Receipt of application upto 5-00 am | 20.04.2006 |
| Issue of tender schedule upto 5-30 pm | 24.04.2006 |
| Last Date of Receipt of sealed tender form from contractor upto 4.30 pm | 29.04.2006 |

**CONDITIONS:**

**I. General.**

1. The applicant should submit his application in person along with the original registration pass book. No representative will be entertained.
2. The competent authority reserves the right to reject any / all the tenders without assigning any reason there off duly considering his track record.
3. No materials will be supplied departmentally. Contractor has to procure all the materials required for the work from their own sources in accordance with relevant specification and Certificates
4. Contractor should produce documents for having Hot mix plant-1, Mini mix plant-1, Paver-1, Tipper-4, Road roller-2 and Vibrater roller-1 & all other equipments required for Road works duly attested by a district level officer or Notary otherwise the tender will not be accepted.
5. Contractor has to maintain the work executed by him for a period of two years.
6. Tendering by a Joint Venture of contractors is not permissible.
7. Tender Box has been kept at Central Office Bangalore, Circle office Shimoga & Division office Shimoga

**II. Technical Bid:- (Cover-1)**

1. The contractor must submit the following documents in duplicate with superscribing on the cover as Cover-1:- Technical Bid.
2. The E.M.D. should be paid in the form of Demand Draft/Banker's Cheque of any Nationalised/Shedule Bank drawn in favour of KARNATAKA ROAD DEVELOPMENT CORPORATION LIMITED and payable at Bangalore and enclosed along with Technical Bid.
3. The agency should have achieved minimum Annual construction Turn over of value equal to 50% of the amount put to tender in any one year of the last 5 years (April 2000 to March 2005) (Ref FORM 2).
4. Tenderer must have completed at least one single Road work consisting of Bituminous road works for a value of Rs.30% of amount put to tender in the last 5 year period (April 2000 to March 2005) (Ref FORM 3 & 3A)
5. Each Tenderer must submit a letter from a Nationalised / Scheduled Bank that a line of Credit will be available for the tenderer for the tender period for a value of 20% of amount put to Tender (as per Format given in Technical Bid Document) Refer FORM 6).
6. The tenders of those tenderers who have not completed the NABARD/CRF/PWD/KRDCL works with in the Tender period will not be considered for bid opening. The tenders shall furnish a list of works in had (Refer Form 4)
7. All forms and requirements specified in the technical bid volume are to be completed and furnished along with all details in the technical bid.
8. All documents shall be attested by a district level officer or Notary otherwise the tender will not be accepted.

**III. Financial Bid:- (Cover-2)**

1. The rates must be quoted in words and figures in duplicate in Schedule-B.
2. The contractor has to complete the form PWG-65 and PWG-66 by filling up all the details duly affixing his signature.
3. The sealed cover containing Schedule-B in duplicate shall be superscribed on the cover as Financial Bid-(Cover-2)
4. For any further details regarding the work & the conditions can be obtained from this office, during office hours.

Executive Engineer,
PWD Shimoga Division, Shimoga.

PR- 185

## ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ-576101

## ಸಂಕ್ಷಿಪ್ತ ಟೆಂಡರು ಪ್ರಕಟಣೆ

**ಸಂಖ್ಯೆ: ಕಾನಿಇಂ:ಬಂಮೀವಿ:ಉಡುಪಿ:ಎಇ:ಟೆಂಡರು ಸೂಚನೆ:02:2005-06, ದಿನಾಂಕ: 1ನೇ ಏಪ್ರಿಲ್ 2006**

ಕರ್ನಾಟಕ ರಾಜ್ಯಪಾಲರ ಪರವಾಗಿ ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಇವರು ಈ ಕೆಳಕಂಡ ಕಾಮಗಾರಿಗಾಗಿ ಪ್ರತ್ಯೇಕ ಮೊಹರಾದ ಟೆಂಡರುಗಳನ್ನು ಕರ್ನಾಟಕ ರಾಜ್ಯ ಲೋಕೋಪಯೋಗಿ ಇಲಾಖೆಯಲ್ಲಿ, ಸಿ.ಪಿ.ಡಬ್ಲ್ಯೂ.ಡಿ. ಯಲ್ಲಿ ಪೋರ್ಟ್ ಟ್ರಸ್ಟ್‌ನಲ್ಲಿ ಹೆಸರನ್ನು ನೋಂದಾಯಿಸಲಾದ ಅರ್ಹ ಗುತ್ತಿಗೆದಾರರಿಂದ ಕೆಲಸದ ಹೆಸರನ್ನು ಮೊಹರಾದ ಲಕೋಟೆಯ ಮೇಲೆ ನಮೂದಿಸಿ ನಿಗದಿತ ನಮೂನೆಯಲ್ಲಿ ದ್ವಿಪ್ರತಿಯಲ್ಲಿ ಆಹ್ವಾನಿಸಲಾಗಿದೆ. ಭರ್ತಿ ಮಾಡಿದ ಟೆಂಡರುಗಳನ್ನು ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಇವರು ದಿನಾಂಕ: 24.4.2006 ರಂದು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸುವರು. ಟೆಂಡರನ್ನು ಸಾಧ್ಯವಾದಲ್ಲಿ ಅದೇ ದಿನ 4.30 ಗಂಟೆಗೆ ತೆರೆಯಲಾಗುವುದು.

ನಿಬಂಧನೆಗಳೊಂದಿಗೆ ಟೆಂಡರನ್ನು ಒದಗಿಸಿದಲ್ಲಿ ತಿರಸ್ಕರಿಸಲಾಗುವುದು.

ಖಾಲಿ ಟೆಂಡರು ಫಾರಂಗಳಿಗಾಗಿ ಅರ್ಜಿಯನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಅದನ್ನು ಹಿಂತಿರುಗಿಸುವುದಿಲ್ಲ) ದಿನಾಂಕ: 22.4.2006 ರವರೆಗೆ ಕಛೇರಿ ಕೆಲಸದ ಎಲ್ಲಾ ದಿನಗಳಂದು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಗುತ್ತಿಗೆದಾರರು ಅರ್ಜಿ ಫಾರಂನೊಂದಿಗೆ ರಿಜಿಸ್ಟ್ರೇಷನ್ ನವೀಕರಣ ಸರ್ಟಿಫೈಡ್ ಪ್ರತಿಯನ್ನು ಲಗ್ತೀಕರಿಸಿರಬೇಕು.

ಖಾಲಿ ಟೆಂಡರು ಫಾರಂಗಳನ್ನು ದಿನಾಂಕ: 22.4.2006 ರಂದು ವಿತರಿಸಲಾಗುವುದು. ಹೆಚ್ಚಿನ ವಿವರಗಳನ್ನು ವಿಭಾಗೀಯ ಕಛೇರಿಯಲ್ಲಿ ಎಲ್ಲಾ ಕೆಲಸದ ದಿನಗಳಂದು ಕಛೇರಿ ವೇಳೆಯಲ್ಲಿ ನೀಡಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರು ಅಂದಾಜು ಮೊತ್ತ (ಲಕ್ಷಗಳಲ್ಲಿ) | ಇ.ಎಂ.ಡಿ. | ಕಾಮಗಾರಿ ಮುಗಿಸಲು ನಿಗದಿಪಡಿಸಿದ ಅವಧಿ | ಟೆಂಡರು ನಮೂನೆ | ಟೆಂಡರು ಫಾರಂ ಬೆಲೆ | ಅರ್ಹ ಗುತ್ತಿಗೆ ದಾರರು |
|---|---|---|---|---|---|---|---|
| 1 | ಕರ್ನಾಟಕ ರಾಜ್ಯ, ಉಡುಪಿ ಜಿಲ್ಲೆ, ಗಂಗೊಳ್ಳಿ ಮೀನುಗಾರಿಕಾ ಬಂದರು ಅಭಿವೃದ್ಧಿ ಹಾಗೂ ಮೀನುಗಾರಿಕಾ ಬಂದರಿನಲ್ಲಿ ಬ್ರೇಕ್ ವಾಟರ್ ನಿರ್ಮಾಣದ ಕುರಿತಂತೆ ಅಧ್ಯಯನ ನಡೆಸಲು ಟೈಡ್ ಲೆವಲ್ ಡಾಟಾ, ಕರೆಂಟ್ ಆ್ಯಂಡ್ ಡೈರಕ್ಷನ್ ಡಾಟಾ, ಹೈಡ್ರೊಗ್ರಾಫಿಕ್ ಸರ್ವೇ, ಕ್ರಾಸ್ ಸೆಕ್ಷನ್ ಆಫ್ ರಿವರ್ ಡೆಪತ್ ಹಾಗೂ ವರದಿ ತಯಾರಿಕೆ ಮತ್ತು ನಕ್ಷೆ ತಯಾರಿಸುವ ಕಾಮಗಾರಿ | ರೂ. 8.90 | ರೂ. 17800.00 | 2 ತಿಂಗಳು (ಮಳೆಗಾಲದ ಅವಧಿ ಸೇರಿ) | ಐಟಂ ವಾರು | 2,000.00 + ತೆರಿಗೆ | 3ನೇ ದರ್ಜೆ ಮತ್ತು ಮೇಲ್ಪಟ್ಟು |

**ಸೂಚನೆ:**

1. ಕಾಮಗಾರಿಗೆ ಬೇಕಾದ ಎಲ್ಲಾ ಸಾಮಗ್ರಿಗಳನ್ನು ಮತ್ತು ಸಲಕರಣೆಗಳನ್ನು ಗುತ್ತಿಗೆದಾರರೇ ಸ್ವಂತ ಖರ್ಚಿನಿಂದ ಪೂರೈಸಿಕೊಳ್ಳತಕ್ಕದ್ದು ಹಾಗೂ ಈ ಬಗ್ಗೆ ಸಾಮಗ್ರಿಗಳ ಪ್ರಮಾಣ ಪತ್ರವನ್ನು ಒದಗಿಸುವುದು.
2. ಮೇಲೆ ತಿಳಿಸಿದ ದಿನಾಂಕಗಳಂದು ಸರ್ಕಾರಿ ರಜೆಗಳು ಬಂದರೆ ಅದರ ಮುಂದಿನ ದಿನಾಂಕವನ್ನು ಪರಿಗಣಿಸುವುದು.
3. ಇ.ಎಂ.ಡಿ. ಯನ್ನು ಡಿಮಾಂಡ್ ಡ್ರಾಫ್ಟ್ ಅಥವಾ ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಇವರ ಹೆಸರಿನಲ್ಲಿ ಪ್ಲೆಡ್ಜ್ ಮಾಡಲಾದ ರಾಷ್ಟ್ರೀಯ ಉಳಿತಾಯ ಪತ್ರಗಳು ಅಥವಾ ಷೆಡ್ಯೂಲ್ಡ್ ಬ್ಯಾಂಕಿನ ಇಲ್ಲವೆ ರಾಷ್ಟ್ರೀಕೃತ ಬ್ಯಾಂಕಿನಿಂದ ಕೊಡಮಾಡಿದ ಬ್ಯಾಂಕರ್ಸ್ ಚೆಕ್ ರೂಪದಲ್ಲಿ ಮಾತ್ರ ಸಲ್ಲಿಸತಕ್ಕದ್ದು. ಇ.ಎಂ.ಡಿ. ಯನ್ನು ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ಸ್ವೀಕರಿಸಲಾಗುವುದಿಲ್ಲ.
4. ಗುತ್ತಿಗೆದಾರರು ಟೆಂಡರಿಗಿಟ್ಟ ಕಾಮಗಾರಿಯ ಮೊತ್ತದ ಶೇಕಡಾ 30 ಭಾಗದಷ್ಟು ಮೊತ್ತದ ಅಂದರೆ ರೂ.2.67 ಲಕ್ಷಕ್ಕೆ ಮೇಲ್ಪಟ್ಟು ಇದೇ ರೀತಿಯ ಕಾಮಗಾರಿ ಮಾಡಿದ ಬಗ್ಗೆ ಸಂಬಂಧಪಟ್ಟ ಕಾರ್ಯನಿರ್ವಾಹಕ ಇಂಜಿನಿಯರ್ ರವರಿಂದ ಪ್ರಮಾಣ ಪತ್ರವನ್ನು ಮತ್ತು ಗುತ್ತಿಗೆದಾರರ ನೋಂದಣಿ ಪತ್ರದ ಪ್ರತಿಯನ್ನು ಅರ್ಜಿಯೊಂದಿಗೆ ತಪ್ಪದೆ ಸಲ್ಲಿಸತಕ್ಕದ್ದು ಇಲ್ಲವಾದಲ್ಲಿ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಯನಿರ್ವಾಹಕ ಇಂಜಿನಿಯರ್,
ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ.

ಪಿ.ಆರ್. 187

## ಪೊಲೀಸ್ ಇಲಾಖೆ

## ಪೊಲೀಸ್ ಅಧೀಕ್ಷಕರ ಕಛೇರಿ, ಚಿತ್ರದುರ್ಗ

## ನಮೂನೆ-1

## (9ನೇ ನಿಯಮ ನೋಡಿ)

## ಅಧಿಸೂಚನೆ

**ಟಿ. ಬೋಸಯ್ಯ, ಸಿಪಿಸಿ-1174** ರವರು ಪೊಲೀಸ್ ಕಾನ್ಸ್‌ಟೇಬಲ್ (ನಾಗರೀಕ) ಆಗಿ, ಚಿತ್ರದುರ್ಗ ಕೋಟೆ ಪೊಲೀಸ್ ಠಾಣೆ ಇಲ್ಲಿ ಕೆಲಸ ನಿರ್ವಹಿಸುತ್ತಿದ್ದು, ಇವರ ಹೆಸರನ್ನು **ಶ್ರೀ ಸುನೀಲ್ ಟಿ. ಬೋಸ್** ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ.

ಪಿ.ಡಿ. 87

ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ.

**FORM IV**
**(See Rule 12)**
**NOTICE**

It is hereby notified that the undersigned has changed his name from **SOMASING SHANKAR LAMANI** to **SOMASING SHANKAR PAWAR.**

PD-88 **SOMASING SHANKAR LAMANI**

## ಉದ್ಯೋಗ ಮತ್ತು ತರಬೇತಿ ಇಲಾಖೆ
## ಪ್ರಾಚಾರ್ಯರ ಕಛೇರಿ, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಕೊಳ್ಳೇಗಾಲ-571440
## ಬಹಿರಂಗ ಹರಾಜು ಪ್ರಕಟಣೆ

**ಸಂಖ್ಯೆ: ಕೈತಸಂ/ಕೊ/ಉಗ್ರಾಣ/ನಿವವಿ-1/2005-06, ದಿನಾಂಕ: 25ನೇ ಮಾರ್ಚ್ 2006**

ಈ ಕೆಳಕಂಡ ನಿರುಪಯುಕ್ತ ವಸ್ತುಗಳನ್ನು ಪ್ರಾಚಾರ್ಯರು ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಕೊಳ್ಳೇಗಾಲರವರ ಕಛೇರಿ ಆವರಣದಲ್ಲಿ ದಿನಾಂಕ: **29.05.2006 ರಂದು ಬೆಳಿಗ್ಗೆ 11.00 ಘಂಟೆಗೆ** ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಆಸಕ್ತಿಯುಳ್ಳವರು ಸದರಿ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು ಅತ್ಯಂತ ಹೆಚ್ಚಿನ ಮೌಲ್ಯದ ಬಿಡ್ಡುದಾರರಿಗೆ ಜಂಟಿ ನಿರ್ದೇಶಕರು (ತ) ವಿಭಾಗೀಯ ಕಛೇರಿ, ಮೈಸೂರುರವರ ಅನುಮೋದನೆ ಪಡೆದು ನಂತರ ಕೊಡಲಾಗುವುದು.

**ಬಹಿರಂಗ ಹರಾಜಿಗೆ ಒಳಪಡುವ ನಿರುಪಯುಕ್ತ ವಸ್ತುಗಳು ಈ ಕೆಳಗಿನಂತಿವೆ.**

| | | |
|---|---|---|
| 1 | ಎಂ.ಎಸ್.ಸ್ಕ್ಯಾಪ್ (ಎಂ.ಎಸ್.ಷೀಟ್ ಮತ್ತು HSS ಬ್ಲೇಡ್ ಸೇರಿದಂತೆ) | ಅಂದಾಜು 850 ಕೆ.ಜಿ.ಗಳು |
| 2 | ವಿದ್ಯುತ್ಕರ್ಮಿ, ಸ್ಕ್ಯಾಪ್ | ಅಂದಾಜು 21 ಕೆ.ಜಿ.ಗಳು |
| 3 | ವಿದ್ಯುತ್ಕರ್ಮಿ, ತಾಮ್ರದ ಸ್ಕ್ಯಾಪ್ | ಅಂದಾಜು 4 ಕೆ.ಜಿ.ಗಳು |
| 4 | ವಿದ್ಯುನ್ಮಾನ ಸ್ಕ್ಯಾಪ್ | ಅಂದಾಜು 8 ಕೆ.ಜಿ.ಗಳು |

**ಷರತ್ತುಗಳು:**

1. ನಿರುಪಯುಕ್ತ ವಸ್ತುಗಳನ್ನು ಹೇಗಿದೆಯೋ ಹಾಗೆ ಚಡಾ ಸವಾಲಿನ ಮೂಲಕ ಹರಾಜು ಮಾಡುವುದು.
2. ಹರಾಜಿನಲ್ಲಿ ಭಾಗವಹಿಸುವವರು ಹರಾಜು ದಿನದಂದು ಬೆಳಿಗ್ಗೆ 11.00 ಗಂಟೆಯೊಳಗೆ ರೂ.500.00 (ಐದುನೂರು ರೂ.ಗಳು) ಗಳನ್ನು ಠೇವಣಿಯನ್ನಾಗಿ (EMD) ನಗದು ನೀಡಿ ಹೆಸರು ನೋಂದಾಯಿಸಿಕೊಳ್ಳತಕ್ಕದ್ದು.
3. ಹರಾಜು ದಿನದಂದೇ ಬಿಡ್ಡಿನ ಪೂರ್ಣ ಹಣವನ್ನು ನಗದಾಗಿ ಪಾವತಿಸಬೇಕು, ಮತ್ತು ಹರಾಜು ಬಿಡ್ಡುದರಕ್ಕೆ ನೀಡಬೇಕಾದ ತೆರಿಗೆ ಸರ್ ಚಾರ್ಜ್ ಇತ್ಯಾದಿಗಳನ್ನು ಬಿಡ್ಡು ಹಣದೊಂದಿಗೆ ನಗದು ಪಾವತಿಸುವುದು.
4. ಹರಾಜು ದಿನದಂದು ಸರ್ಕಾರಿ ನಿಯಮಾನುಸಾರ ಲಭ್ಯವಿರುವ VAT ತೆರಿಗೆ ವಿಧಿಸಲಾಗುವುದು.
5. ಯಾವುದೇ ಕಾರಣ ನೀಡದೇ ಸದರಿ ಹರಾಜನ್ನು ಸ್ವೀಕರಿಸುವ ಅಥವಾ ಮುಂದೂಡುವ ಅಥವಾ ರದ್ದು ಪಡಿಸುವ ಅಧಿಕಾರವನ್ನು ಪ್ರಾಚಾರ್ಯರು, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಕೊಳ್ಳೇಗಾಲ ಇವರು ಹೊಂದಿರುತ್ತಾರೆ.

ಪ್ರಾಚಾರ್ಯರು,
ಪಿ.ಆರ್. 188 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಕೊಳ್ಳೇಗಾಲ-571440.

## ಲೋಕೋಪಯೋಗಿ ಇಲಾಖೆ
## ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ
## ಅಲ್ಪಾವಧಿ ಟೆಂಡರ್ ಪ್ರಕಟಣೆ (ಎರಡು ಲಕೋಟೆ ಪದ್ಧತಿಯಲ್ಲಿ)

**ಸಂಖ್ಯೆ: ಇಎನ್‌ಹೆಚ್/ಚಿ/ಸ.ಇ-2/ಟೆಂಪ್ರ/ಕೇರನಿ/2005-06/5207, ದಿನಾಂಕ: 31ನೇ ಮಾರ್ಚ್ 2006**

ಮೊಹರಾದ ಐಟಂವಾರು ದರದ ಟೆಂಡರುಗಳನ್ನು ಕೆಳಗೆ ಕಾಣಿಸಿದ ಕೆಲಸಕ್ಕೆ ಎರಡು ಲಕೋಟೆ ಪದ್ಧತಿಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದಂತೆ ದ್ವಿಪ್ರತಿಯಲ್ಲಿ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ಹೆಸರನ್ನು ನೋಂದಾಯಿಸಿದ ಒಂದನೇ ದರ್ಜೆಯ ಅರ್ಹ ಗುತ್ತಿಗೆದಾರರಿಂದ ಹಾಗೂ ಕೇಂದ್ರ ಭೂಸಾರಿಗೆ ಮಂತ್ರಾಲಯದಿಂದ ಅನುಮೋದಿತ ಸಂಸ್ಥೆಗಳಿಂದ ಆಹ್ವಾನಿಸಲಾಗಿದೆ. ಎರಡು ಲಕೋಟೆ ಪದ್ಧತಿಯಲ್ಲಿ (1) ತಾಂತ್ರಿಕ ಬಿಡ್ (ಭಾಗ-1) ಮತ್ತು (2) ಆರ್ಥಿಕ ಬಿಡ್ (ಭಾಗ-2) ಗಳಾಗಿರುತ್ತವೆ. ಬಿಡ್‌ಗಳನ್ನು ಎರಡು ಭಾಗಗಳಲ್ಲಿ ಎರಡು ಮೊಹರಾದ ಹಾಗೂ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ಎಂದು ಪ್ರತ್ಯೇಕವಾಗಿ ನಮೂದಿಸಲ್ಪಟ್ಟ ಲಕೋಟೆಗಳನ್ನು ಮತ್ತೊಂದು ಮೊಹರಾದ ಲಕೋಟೆಯಲ್ಲಿಟ್ಟು ಹಾಗೂ ಕೆಲಸದ ಹೆಸರನ್ನು ನಮೂದಿಸಲ್ಪಟ್ಟು ಗುತ್ತಿಗೆದಾರರ ಪೂರ್ಣ ಅಂಚೆ ವಿಳಾಸದೊಂದಿಗೆ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳಿಗೆ ವಿಳಾಸಿಸಿ ಸಲ್ಲಿಸುವುದು. ಪೂರ್ಣ ಪ್ರಮಾಣದ ಬಿಡ್‌ಗಳನ್ನು ಅಧೀಕ್ಷಕ ಅಭಿಯಂತರು, ರಾಷ್ಟ್ರೀಯ ಹೆದ್ದಾರಿ ವೃತ್ತ, ಬೆಂಗಳೂರು ಹಾಗೂ ಕಾರ್ಯಪಾಲಕ ಅಭಿಯಂತರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ದಿನಾಂಕ: **24.04.2006** ರಂದು ಸಾಯಂಕಾಲ 4.00 ಗಂಟೆಯವರೆಗೆ ಕೆಪಿಡಬ್ಲ್ಯೂಡಿ ಕೋಡ್ ಭಾಗ-2, ಫಾರಂ ನಂ. ಪಿಡಬ್ಲ್ಯೂಜಿ 65 ಹಾಗೂ 66ರ ನಿಬಂಧನೆಗಳು, ಗುತ್ತಿಗೆ ಷೆಡ್ಯೂಲ್‌ನ ವಿಶೇಷ ನಿಬಂಧನೆಗಳು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದ ನಿಬಂಧನೆಗೊಳಪಟ್ಟು, ಸ್ವೀಕರಿಸಲಾಗುವುದು. ತಾಂತ್ರಿಕ ಬಿಡ್ ಭಾಗ-1ನ್ನು ಈ ಕೆಳಗೆ ಕಾಣಿಸಿದ ದಿನಾಂಕದಂದು ಕಾರ್ಯನಿರ್ವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ತೆರೆಯಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅರ್ಹರಾದಂಥ ಗುತ್ತಿಗೆದಾರರ ಆರ್ಥಿಕ ಬಿಡ್ ಲಕೋಟೆಗಳನ್ನು ಮಾತ್ರ ತೆರೆಯಲಾಗುತ್ತದೆ. ಈ ಕೆಳಗೆ ಕಾಣಿಸಿದ ದಿನಗಳಲ್ಲಿ ಯಾವುದಾದರೂ ರಜಾ ದಿನವಾದಲ್ಲಿ, ಮುಂದೆ ಸೂಕ್ತ ದಿನಾಂಕವನ್ನು ತಿಳಿಸಲಾಗುವುದು.

| ಕ್ರ. ಸಂ. | ಕೆಲಸದ ಹೆಸರು | ಟೆಂಡರಿಗೆ ನಿಗದಿ ಪಡಿಸಿದ ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) | ಇಡುಗಂಟು (ಇಎಂಡಿ) (ಮೊತ್ತ ರೂ.ಗಳಲ್ಲಿ) | ಖಾಲಿ ಟೆಂಡರ್ ಫಾರ್ಮಿನ ಬೆಲೆ ಸೆಟ್ಟಿಗೆ + ಟ್ಯಾಕ್ಸ್ ಮರು ಪಾವತಿಯಾಗದ | ಕೆಲಸದ ಸ್ವರೂಪ | ಕಾಮಗಾರಿ ಪೂರ್ಣಗೊಳಿಸುವ ಕಾಲಾವಧಿ (ಮಳೆಗಾಲ ಸಹಿತ) |
|---|---|---|---|---|---|---|
| 1 | ಕೇಂದ್ರ ರಸ್ತೆ ನಿಧಿಯಡಿಯಲ್ಲಿ ಚಿತ್ರದುರ್ಗ ಜಿಲ್ಲೆಯ ಹಿರೇಬೆನ್ನೂರು-ಸಿರಿಗೆರೆ-ಸಾಸಲು ರಸ್ತೆಯ ಕಿ.ಮಿ. 0.00 ರಿಂದ 22.00 (ಉಳಿದ ಭಾಗ) ರವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ (ಹೊಳಲ್ಕೆರೆ ಕ್ಷೇತ್ರ) | 235.00 | 2,35,000/- | ರೂ. 23000+12.5% ವ್ಯಾಟ್ | ರಸ್ತೆ ಅಭಿವೃದ್ಧಿ ಕಾಮಗಾರಿ | 6 ತಿಂಗಳು (ಮಳೆಗಾಲ ಸಹಿತ) |
| 2 | ಕೇಂದ್ರ ರಸ್ತೆ ನಿಧಿಯಡಿಯಲ್ಲಿ ದಾವಣಗೆರೆ ಜಿಲ್ಲೆಯ ತ್ಯಾವಣಿಗೆ-ದುಮ್ಮಿ ವಯಾ ನೀತಿಗೆರೆ-ಹಿರೇಗುಂಗೂರು ಕಿ.ಮೀ. 27.40 ರಿಂದ 40.80 ರವರೆಗೆ 16.00 ಕಿ.ಮೀ. ರಸ್ತೆ ಅಭಿವೃದ್ಧಿ ಕಾಮಗಾರಿ (ಚನ್ನಗಿರಿ ಕ್ಷೇತ್ರ) | 132.00 | 1,32,000/- | ರೂ. 13,000+12.5% ವ್ಯಾಟ್ | ರಸ್ತೆ ಅಭಿವೃದ್ಧಿ ಕಾಮಗಾರಿ | 4 ತಿಂಗಳು (ಮಳೆಗಾಲ ಸಹಿತ) |

**ಷರತ್ತುಗಳು:**

1) ಕೆಲಸಕ್ಕೆ ಬಿಡ್ ಮಾಡಲು ಆಸಕ್ತಿ ಇರುವ ಗುತ್ತಿಗೆದಾರರು ಅರ್ಜಿಯನ್ನು ಖಾಲಿ ಟೆಂಡರ್ ಫಾರಂಗೆ ನಿಗದಿಪಡಿಸಿರುವ ಮೊತ್ತವನ್ನು (ಹಿಂದಿರುಗಿಸಲಾಗದ) ನಗದು ಅಥವಾ ಡಿ.ಡಿ.ಯನ್ನು ಕಾರ್ಯನಿರ್ವಾಹಕ ಅಭಿಯಂತರು ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿಗೆ ಮತ್ತು ಚಿತ್ರದುರ್ಗದಲ್ಲಿ ಪಾವತಿಯಾಗುವಂತೆ, ಕೆಳಗೆ ಸಹಿ ಮಾಡಿರುವವರ ಕಛೇರಿಗೆ ಸಲ್ಲಿಸತಕ್ಕದ್ದು. ಗುತ್ತಿಗೆದಾರರು ಗುತ್ತಿಗೆದಾರರ ನೋಂದಾವಣಿ ಪತ್ರದ ಪ್ರತಿ, ಇತ್ತೀಚಿನ ಕರ್ನಾಟಕ ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು (ಸಂಬಂಧಪಟ್ಟ ಇಲಾಖೆಯಿಂದ ಪಡೆದು) ಹಾಗೂ ಕಾಮಗಾರಿಗೆ ನಿಗದಿಪಡಿಸಿದ ಯಂತ್ರೋಪಕರಣಗಳ ಮಾಲೀಕತ್ವದ ಪ್ರಮಾಣ ಪತ್ರಗಳು, ಈ ಎಲ್ಲಾ ದಾಖಲೆಗಳನ್ನು, ವಿಭಾಗ ಮಟ್ಟದ ಅಧಿಕಾರಿಗಳಿಗೆ ಕಡಿಮೆಯಿಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಿದ ಪ್ರತಿಗಳನ್ನು ಅರ್ಜಿಯ ಜೊತೆಯಲ್ಲಿ ಕಡ್ಡಾಯವಾಗಿ ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

2) ಟೆಂಡರು ದಿನಾಂಕಗಳ ವಿವರಗಳು ಈ ಕೆಳಕಂಡಂತಿವೆ.

| | | |
|---|---|---|
| ಅ) | ಖಾಲಿ ಟೆಂಡರ್ ಫಾರಂಗಳಿಗಾಗಿ ಅರ್ಜಿ ಸಲ್ಲಿಸುವ ಹಾಗೂ ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ಕೊನೆಯ ದಿನಾಂಕ: | 22.04.2006 ಕಛೇರಿ ವೇಳೆಯಲ್ಲಿ (ರಜಾದಿನಗಳನ್ನು ಹೊರತುಪಡಿಸಿ) |
| ಆ) | ಪೂರ್ತಿಗೊಳಿಸಿದ ಮೊಹರಾದ ಟೆಂಡರುಗಳನ್ನು ಸಲ್ಲಿಸುವ ದಿನಾಂಕ: | 24.04.2006, ಮಧ್ಯಾಹ್ನ 4.00 ಗಂಟೆಯ ವರೆಗೆ ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |
| ಇ) | ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ: | 24.04.2006, ಸಾಯಂಕಾಲ 5.00 ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |
| ಈ) | ತಾಂತ್ರಿಕವಾಗಿ ಅರ್ಹವಾದ ತಾಂತ್ರಿಕ ಬಿಡ್‌ಗಳ ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕ | 29.04.2005, ಸಾಯಂಕಾಲ 5.00 ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ. |

**ತಾಂತ್ರಿಕ ಬಿಡ್‌ಗಳಿಗೆ ಷರತ್ತುಗಳು**

1. ಇ.ಎಂ.ಡಿ. ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪಡೆದು ಡಿ.ಡಿ.: ಎಫ್.ಡಿ.ಆರ್. : ಪೇ ಆರ್ಡರ್ : ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಷೆಡ್ಯೂಲ್ ಬ್ಯಾಂಕ್‌ಗಳಿಂದ ಪಡೆದ ಬ್ಯಾಂಕ್ ಗ್ಯಾರಂಟಿ ಅಥವಾ ರಾಷ್ಟ್ರೀಯ ಉಳಿತಾಯ ಪತ್ರ (ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಒತ್ತೆ ಇಡತಕ್ಕದ್ದು) ವನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಸಲ್ಲಿಸತಕ್ಕದ್ದು. ಇ.ಎಂ.ಡಿ.ಯನ್ನು ಬೇರಾವುದೇ ಹೆಸರಿನಲ್ಲಿ ಪಡೆದ ಅಥವಾ ಒತ್ತೆ ಇಡಲಾದಲ್ಲಿ ತಾಂತ್ರಿಕ ಬಿಡ್‌ಗಳನ್ನು ಯಾವುದೇ ವಿಚಾರಣೆ ಅಥವಾ ವಿವರಣೆಯನ್ನು ಮಾಡದೇ, ಅನರ್ಹಗೊಳಿಸಲಾಗುವುದು. ಬ್ಯಾಂಕ್ ಗ್ಯಾರಂಟಿಯು ಕಡ್ಡಾಯವಾಗಿ ಟೆಂಡರ್ ಫಾರಂನಲ್ಲಿರುವ ಪಿ.ಡಬ್ಲ್ಯೂ.ಜಿ-66 ದಕ್ಕೆ ಅನುಗುಣವಾಗಿರತಕ್ಕದ್ದು.
2. ಈ ಟೆಂಡರ್‌ನಲ್ಲಿ ಕರೆಯಲಾಗಿರುವ ಕಾಮಗಾರಿಯ ಡಿಫೆಕ್ಟ್ ಲಯಾಬಲಿಟಿ ಸಮಯವು ಕಾಮಗಾರಿ ಪೂರ್ಣಗೊಳಿಸಿದ ದಿನಾಂಕದಿಂದ ಒಂದು ವರ್ಷವಾಗಿರುತ್ತದೆ. ಕಾಮಗಾರಿಯಲ್ಲಿ ನಿರ್ವಹಿಸಬೇಕಾದ ಕೆಲಸಗಳು ಅತ್ಯುನ್ನತ ಗುಣಮಟ್ಟದಿಂದ ಕೂಡಿದ್ದು ಒಂದು ವರ್ಷದವರೆಗೆ ಯಾವುದೇ ರಿಪೇರಿಯ ಸಾಧ್ಯತೆಗಳಿರುವುದಿಲ್ಲ. ಈ ಮೇಲ್ಕಂಡ ರೀತಿಯ ಕಾಮಗಾರಿಗೆ ಈ ಒಂದು ವರ್ಷದ ಅವಧಿಯಲ್ಲಿ ಯಾವುದಾದರೂ ರಿಪೇರಿಯ ಅವಶ್ಯಕತೆ ಬಿದ್ದಲ್ಲಿ ಗುತ್ತಿಗೆದಾರರು : ಸಂಸ್ಥೆಗಳವರು ಸದರಿ ರಿಪೇರಿ ಅಥವಾ ಮರು ನಿರ್ಮಾಣವನ್ನು ಗುತ್ತಿಗೆದಾರರ : ಸಂಸ್ಥೆಯ ಸ್ವಂತ ವೆಚ್ಚದಲ್ಲಿ ಮಾಡತಕ್ಕದ್ದು. ಇ.ಎಂ.ಡಿ. : ಎಸ್.ಡಿ. ಪರಿಕರಗಳನ್ನು ಮೇಲಿನ ಷರತ್ತಿಗನುಗುಣವಾಗಿ ಸಲ್ಲಿಸತಕ್ಕದ್ದು.
3. ಪ್ರತಿ ಗುತ್ತಿಗೆದಾರರು ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವವನ್ನು ಹೊಂದಿರಬೇಕು ಹಾಗೂ ತಾಂತ್ರಿಕ ಬಿಡ್‌ನ ಜೊತೆಯಲ್ಲಿ ಸಂಬಂಧಪಟ್ಟ ಮಾಲೀಕತ್ವದ ಸಾಕ್ಷಿಯನ್ನು ಈ ಕೆಳಕಂಡಂತೆ ಸಲ್ಲಿಸತಕ್ಕದ್ದು. ಮೇಲಿನ ಮಾಲೀಕತ್ವದ ಸಾಕ್ಷಿಗಳಿಲ್ಲದ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.

| ಕ್ರ. ಸಂ. | ಯಂತ್ರೋಪಕರಣಗಳು | ಬೇಕಾದ ಸಂಖ್ಯೆ | ಮಾಲೀಕತ್ವದ ಪುರಾವೆಗಳು |
|---|---|---|---|
| 1) | 40/60 ಟಿ.ಪಿ.ಹೆಚ್. ಅಥವಾ ಹೆಚ್ಚಿನ ಸಾಮರ್ಥ್ಯದ ಹಾಟ್ ಮಿಕ್ಸ್ ಪ್ಲಾಂಟ್ (ಎಂ.ಓ.ಆರ್.ಟಿ. ಮತ್ತು ಹೆಚ್ ಸ್ಪೆಸಿಫಿಕೇಷನ್‌ಗೆ ಅನುಗುಣವಾಗಿ | ಒಂದು (1) | ಖರೀದಿಸಿದ ಇನ್‌ವಾಯ್ಸ್ : ಸೇಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್‌ನೊಂದಿಗೆ) |

| ಕ್ರ. ಸಂ. | ಯಂತ್ರೋಪಕರಣಗಳು | ಬೇಕಾದ ಸಂಖ್ಯೆ | ಮಾಲೀಕತ್ವದ ಪುರಾವೆಗಳು |
|---|---|---|---|
| 2) | ಪೇವರ್ ಫಿನೀಷರ್ | ಒಂದು (1) | - ಸದರಿ - |
| 3) | ವೈಬ್ರೇಟರಿ ರೋಲರ್ | ಒಂದು (1) | - ಸದರಿ - |
| 4) | ಸ್ಟ್ಯಾಟಿಕ್ ರೋಡ್‌ರೋಲರ್ | ಎರಡು (2) | - ಸದರಿ - |
| 5) | ಮೆಕ್ಯಾನಿಕಲ್ ಸ್ಪ್ರೇಯರ್ | ಎರಡು (2) | - ಸದರಿ - |
| 6) | ಟಿಪ್ಪರ್‌ಗಳು | ನಾಲ್ಕು (4) | ಆರ್.ಟಿ.ಓ. ರವರಿಂದ ಪಡೆದ ರಿಜಿಸ್ಟ್ರೇಷನ್ ಸರ್ಟಿಫಿಕೇಟ್ |
| 7) | ಎಕ್ಸ್‌ವೇಟರ್ | ಒಂದು (1) | ಮಾಲೀಕತ್ವದ ಪ್ರಮಾಣ ಪತ್ರ |
| 8) | ಕಾಂಕ್ರೀಟ್ ಮಿಕ್ಸರ್‌ಗಳು | ಎರಡು (2) | ಖರೀದಿಸಿದ ಇನ್‌ವಾಯ್ಸ್ : ಸೆಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್‌ನೊಂದಿಗೆ) |
| 9) | ವೈಬ್ರೇಟರ್‌ಗಳು | ಎರಡು (2) | - ಸದರಿ - |

4. ಪ್ರತಿ ಗುತ್ತಿಗೆದಾರರು ಟೆಂಡರ್‌ಗಿಟ್ಟ ಮೊತ್ತದ ಶೇಕಡ 30 ರಷ್ಟು ಪ್ರಮಾಣದ ಇದೇ ತರಹದ ಕೆಲಸವನ್ನು ಸಮರ್ಪಕವಾಗಿ ಕಳೆದ ಐದು ಆರ್ಥಿಕ ವರ್ಷದ ಬ್ಲಾಕ್ ಅವಧಿಯಲ್ಲಿ ಮುಗಿಸಿರಬೇಕು. ಅಥವಾ ಗುತ್ತಿಗೆದಾರರು ಶೇಕಡ 30 ರಷ್ಟು ಪ್ರಮಾಣದ ಇದೇ ತರಹದ ಒಂದೇ ಕೆಲಸದ ಬಿಲ್ಲನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಪಡೆದಿರಬೇಕು. ಇದಕ್ಕೆ ಸಂಬಂಧಪಟ್ಟಂತೆ ಅನುಭವದ ಪ್ರಮಾಣ ಪತ್ರದಲ್ಲಿ ಮೇಲಿನ ಅಂಶ ಹಾಗೂ ಕಾಮಗಾರಿಯಲ್ಲಿ ನಿರ್ವಹಿಸಿದ ಕೆಲಸದ ವಿವರಗಳು ಇರತಕ್ಕದ್ದು, ಇಲ್ಲವಾದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.
5. ಆರ್ಥಿಕ ಸಾಮರ್ಥ್ಯದ ಸಾಕ್ಷ್ಯಿಯು, ಟೆಂಡರಿಗಿಟ್ಟ ಮೊತ್ತದ ಶೇಕಡಾ 30 ರಷ್ಟು ಪ್ರಮಾಣದ ಯಾವುದೇ ಷೆಡ್ಯೂಲ್ಡ್ ಬ್ಯಾಂಕಿನ "ಲೈನ್ ಆಫ್ ಕ್ರೆಡಿಟ್‌ಅನ್ನು" ಕಡ್ಡಾಯವಾಗಿ ತಾಂತ್ರಿಕ ಬಿಡ್‌ನಲ್ಲಿ ನಿಗದಿಪಡಿಸಿದ ಪ್ರೊಫಾರ್ಮಾದಲ್ಲಿ ಸಲ್ಲಿಸತಕ್ಕದ್ದು, "ಲೈನ್ ಆಫ್ ಕ್ರೆಡಿಟ್‌ಅನ್ನು" ಸಲ್ಲಿಸದಿದ್ದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.
6. ತಾಂತ್ರಿಕ ಬಿಡ್ ಜೊತೆಯಲ್ಲಿ ಲಗತ್ತಿಸುವ ಎಲ್ಲಾ ದಾಖಲಾತಿಗಳನ್ನು ವಿಭಾಗಮಟ್ಟದ ಅಧಿಕಾರಿಗೆ ಕಡಿಮೆ ಇಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಲ್ಪಟ್ಟಿರಬೇಕು. ಇಲ್ಲವಾದಲ್ಲಿ ಬಿಡ್‌ಗಳು ಅನರ್ಹಗೊಳ್ಳುತ್ತವೆ. ಮೂಲ ದಾಖಲಾತಿಗಳನ್ನು ಟೆಂಡರ್ ಪ್ರಕ್ರಿಯೆಯ ಯಾವುದೇ ಮಟ್ಟದಲ್ಲಿ ಪರಿಶೀಲನೆಗಾಗಿ ಕೇಳಿದಾಗ ಒದಗಿಸತಕ್ಕದ್ದು. ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಕೇಳಿದಾಗ ಒದಗಿಸದಿದ್ದಲ್ಲಿ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.
7. ಸಂಬಂಧಪಟ್ಟ ದಾಖಲಾತಿಗಳನ್ನು ಮತ್ತು ವಿವರಣೆಗಳನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಒದಗಿಸತಕ್ಕದ್ದು, ಕಂಪನಿಯ ವಿವರಗಳು : ಏಜೆನ್ಸಿಗಳು : ಸಂಸ್ಥೆಯ ಪ್ರೊಫೈಲ್‌ಅನ್ನು ಲಗತ್ತಿಸತಕ್ಕದ್ದು.
8. ಜಾಯಿಂಟ್ ವೆಂಚರ್ ಟೆಂಡರ್‌ಗಳನ್ನು ಅಂಗೀಕರಿಸುವುದಿಲ್ಲ.
9. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೇ ತಿರಸ್ಕರಿಸುವ ಹಕ್ಕು ಸಂಬಂಧಪಟ್ಟ ಹಕ್ಕು ಸಂಬಂಧಪಟ್ಟ ಅಧಿಕಾರಿಗಳಿಗೆ ಇರುತ್ತದೆ.
10. ಕರಾರುಗಳನ್ನೊಳಗೊಂಡ ಟೆಂಡರುಗಳನ್ನು ಸ್ವೀಕೃತಿಗಾಗಿ ಪರಿಗಣಿಸುವುದಿಲ್ಲ.
11. ಮೇಲಿನ ಕೆಲಸಗಳ ಬಗ್ಗೆ ಯಾವುದೇ ಮಾಹಿತಿಯನ್ನು ಕೆಳಗೆ ಸಹಿ ಮಾಡಿದವರ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಬಿ. ಪ್ರಭಾಕರಶೆಟ್ಟಿ

ಪಿ.ಆರ್. 189 ಕಾರ್ಯಪಾಲಕ ಅಭಿಯಂತರು, ರಾ.ಹೆ.ವಿಭಾಗ, ಚಿತ್ರದುರ್ಗ.

**ಪ್ರಾಚಾರ್ಯರ ಕಛೇರಿ, ಸರ್ಕಾರಿ ಕೈಗಾರಿಕ ತರಬೇತಿ ಸಂಸ್ಥೆ, ಪಿರಿಯಾಪಟ್ಟಣ-571107, ಮೈಸೂರು ಜಿಲ್ಲೆ**

**ಅಧಿಸೂಚನೆ ಸಂಖ್ಯೆ: ಕೈತಸಂ.ಸಿಪ/ಕಚಾ/ಸಿ.ಆರ್-47/2005-06, ದಿನಾಂಕ: 3ನೇ ಏಪ್ರಿಲ್ 2006**

**ಈ ಸಂಸ್ಥೆಯಲ್ಲಿ ಬಹಿರಂಗ ಹರಾಜಿಗೆ ಲಭ್ಯವಿರುವ ಎಂಟು ನಿರುಪಯುಕ್ತ ಕಚ್ಚಾ ಮತ್ತು ಸಾಮಾಗ್ರಿ ದಾಸ್ತಾನುಗಳ ವಿವರಣಾ ಪಟ್ಟಿ**

| ಕ್ರ.ಸಂ. | ಸಾಮಾಗ್ರಿಗಳ ವಿವರ | ಪ್ರಮಾಣ:ತೂಕ | ಷರಾ |
|---|---|---|---|
| 1 | ಎಂ.ಎಸ್. ಸ್ಕ್ರ್ಯಾಪ್ (ಪ್ಲಾಟ್) | 1444.8 ಕೆ.ಜಿ. | |
| 2 | ಕಾಪರ್‌ವೈರ್ ಸ್ಕ್ರ್ಯಾಪ್ | 12.75 ಕೆ.ಜಿ. | |
| 3 | ಜಿ.ಐ. ಸ್ಕ್ರ್ಯಾಪ್ | 7.95 ಕೆ.ಜಿ. | |
| 4 | ವುಡ್ ಸ್ಕ್ರ್ಯಾಪ್ (ನಿರುಪಯುಕ್ತ ಮರ) | 9.90 ಕೆ.ಜಿ. | |
| 5 | ಎಲೆಕ್ಟ್ರಿಕಲ್ ಸ್ಕ್ರ್ಯಾಪ್ | 10.10 ಕೆ.ಜಿ. | |
| 6 | ನೈಕ್ರೊಮ್ ವೈರ್ ಸ್ಕ್ರ್ಯಾಪ್ | 0.500 ಕೆ.ಜಿ. | |
| 7 | ಅಲ್ಯುಮಿನಿಯಮ್ ಸ್ಕ್ರ್ಯಾಪ್ | 10.75 ಕೆ.ಜಿ. | |
| 8 | ಹಾಕ್‌ಸಾ ಬ್ಲೇಡ್ ಸ್ಕ್ರ್ಯಾಪ್ | 39.70 ಕೆ.ಜಿ. | |
| | **ಒಟ್ಟು** | **1536.45 ಕೆ.ಜಿ.** | |

**ನಿಬಂಧನೆಗಳು:**

1. ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ರೂ.200 ಮೊತ್ತವನ್ನು ಭದ್ರತಾ ಠೇವಣಿಯಾಗಿ ಇಡಬೇಕು. ಹರಾಜಿನ ನಂತರ ಅತಿ ಹೆಚ್ಚಿನ ಬಿಡ್ ಮಾಡಿದ ಇಬ್ಬರನ್ನು ಹೊರತುಪಡಿಸಿ, ಉಳಿದವರಿಗೆ ಹಿಂತಿರುಗಿಸಲಾಗುವುದು.

2. ಲಭ್ಯವಿರುವ ನಿರುಪಯುಕ್ತ ಸಾಮಾಗ್ರಿಗಳನ್ನು ಯಥಾ ಸ್ಥಿತಿಯಲ್ಲಿ ಹರಾಜು ಮಾಡಲಾಗುವುದು.
3. ಹರಾಜನ್ನು ನಡೆಸುವ ಹಾಗೂ ರದ್ದು ಪಡಿಸುವ ಅಧಿಕಾರವನ್ನು ಹರಾಜು ನಡೆಸುವ ಅಧಿಕಾರಿಯವರಿಗೆ ನೀಡಲಾಗಿದೆ.
4. ಹರಾಜನ್ನು ದಿನಾಂಕ: 15.5.2006ರ ಬೆಳಿಗ್ಗೆ 11.00 ಗಂಟೆಗೆ ಸಂಸ್ಥೆಯಲ್ಲಿ ನಡೆಸಲಾಗುವುದು.
5. ಹರಾಜಿನಲ್ಲಿ ಭಾಗವಹಿಸುವವರು ನಿಗದಿತ ದಿನಾಂಕದಂದು ಹರಾಜು ನಡೆಯುವ ಒಂದು ಗಂಟೆ ಮುಂಚಿತವಾಗಿ ಇನ್ನೂರು ರೂ. ಭದ್ರತೆ ಠೇವಣಿಯನ್ನು ಮುಂಗಡವಾಗಿ ಇಡಬೇಕು.

ಪ್ರಾಚಾರ್ಯರು,

ಪಿ.ಆರ್. 190 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಪಿರಿಯಾಪಟ್ಟಣ-571107.

## ತೋಟಗಾರಿಕಾ ಇಲಾಖೆ

## ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರವರ ಕಛೇರಿ, (ರಾಜ್ಯವಲಯ), ಬೆಂಗಳೂರು (ಗ್ರಾ) ಜಿಲ್ಲೆ, ಕಬ್ಬನ್‌ಪಾರ್ಕ್, ಬೆಂಗಳೂರು-01

## ರಾಜ್ಯವಲಯ ತೋಟಗಾರಿಕೆ ಕ್ಷೇತ್ರಗಳ ಮಾವು ಫಸಲಿನ ವಿಲೇವಾರಿಗೆ ಟೆಂಡರ್ ಪ್ರಕಟಣೆ

**ಸಂಖ್ಯೆ: ಹಿಸತೋನಿ:ರಾವ:ಬೆಂಗ್ರಾ:ತಾಸ:67:2005-06, ದಿನಾಂಕ: 3ನೇ ಏಪ್ರಿಲ್ 2006**

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ರಾಜ್ಯವಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್ ಉದ್ಯಾನವನ ರವರ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ತೋಟಗಾರಿಕೆ ಕ್ಷೇತ್ರ : ಸಸ್ಯಾಗಾರಗಳಲ್ಲಿ 2006ನೇ ಸಾಲಿನ ಪೂರ್ಣ ಅವಧಿಯ ಮಾವು ಫಸಲಿನ ವಿಲೇವಾರಿಗೆ ಇಲಾಖೆಯ ಪರಿಷ್ಕೃತ ನಿಯಮಾವಳಿಗಳ ಪ್ರಕಾರ ಟೆಂಡರ್ ಪ್ರಕಟಣೆಯನ್ನು ಹೊರಡಿಸಿದೆ. ಟೆಂಡರ್ ಪ್ರಕ್ರಿಯೆಯನ್ನು ಅನುಬಂಧದಲ್ಲಿ ತಿಳಿಸಿರುವ ದಿನಾಂಕ ಮತ್ತು ವೇಳೆಯಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ) ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್‌ಪಾರ್ಕ್ ರವರ ಕಛೇರಿಯಲ್ಲಿ ನಡೆಸಲಾಗುವುದು. ಆಸಕ್ತಿಯುಳ್ಳ ಸಾರ್ವಜನಿಕರು ಮತ್ತು ವ್ಯಾಪಾರಸ್ಥರು ಸದರಿ ಟೆಂಡರ್ ಪ್ರಕ್ರಿಯೆಯಲ್ಲಿ ಭಾಗವಹಿಸಲು ಕೋರಲಾಗಿದೆ.

ಟೆಂಡರ್ ಫಾರಂಗಳನ್ನು ರೂ.25-00 ಪಾವತಿ ಮಾಡಿ ಈ ಕಛೇರಿ ಅಥವಾ ಆಯಾಯ ಕ್ಷೇತ್ರಗಳಲ್ಲಿ ಪಡೆಯಬಹುದು. **ಟೆಂಡರ್‌ದಾರರು ಫಸಲಿಗೆ ನಿಗದಿಪಡಿಸಿದ ಠೇವಣಿ ಮೊತ್ತ ಮತ್ತು ಫಸಲಿಗೆ ತಾವು ನಮೂದಿಸುವ ಟೆಂಡರ್ ಮೊತ್ತದ ಶೇಕಡ 50 ಭಾಗದ ಮೊತ್ತವನ್ನು ಪ್ರತ್ಯೇಕವಾಗಿ ಅಡ್ಡಗೆರೆ ಎಳೆದ ಡಿಮಾಂಡ್ ಡ್ರಾಫ್ಟ್ ರೂಪದಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ) ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್ ಉದ್ಯಾನವನ, ಬೆಂಗಳೂರು-01 ರವರ ಹೆಸರಿನಲ್ಲಿ ಪಡೆದು ಟೆಂಡರ್ ಜೊತೆ ಕಡ್ಡಾಯವಾಗಿ ಲಗತ್ತಿಸಬೇಕು.** ಟೆಂಡರ್ ಫಾರಂನಲ್ಲಿ ಟೆಂಡರ್‌ದಾರರು ತಾವು ದಾಖಲಿಸುವ ಮೊತ್ತವನ್ನು ಕಡ್ಡಾಯವಾಗಿ ನಮೂದಿಸಿ ತಮ್ಮ ಹೆಸರು ವಿಳಾಸಗಳನ್ನು ಭರ್ತಿ ಮಾಡಿ ಸಹಿ ಮಾಡಿರಬೇಕು. ಇಲ್ಲದಿದ್ದಲ್ಲಿ ಅಪೂರ್ಣ ಟೆಂಡರ್ ಎಂದು ಪರಿಗಣಿಸಿ ತಿರಸ್ಕರಿಸಲಾಗುವುದು. **ಟೆಂಡರ್‌ದಾರರು ಭರ್ತಿಮಾಡಿದ ಮೊಹರಾದ ಟೆಂಡರ್ ಫಾರಂಗಳನ್ನು ನಿಗದಿಪಡಿಸಿದ ದಿನಾಂಕ ಮತ್ತು ವೇಳೆಗೆ ಅಥವಾ ಅದಕ್ಕೂ ಮೊದಲು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ರಾಜ್ಯವಲಯ) ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್‌ಪಾರ್ಕ್‌ರವರ ಕಛೇರಿಯಲ್ಲೇ ಸಲ್ಲಿಸಬೇಕು.**

ಮೇಲಿನ ತೋಟಗಾರಿಕೆ ಕ್ಷೇತ್ರಗಳ ಫಸಲನ್ನು ಟೆಂಡರ್ ಅನುಮೋದನೆಯಾದ ದಿನಾಂಕದಿಂದ 10 ದಿನಗಳೊಳಗಾಗಿ ಪೂರ್ಣ ಮೊಬಲಗನ್ನು ಪಾವತಿ ಮಾಡಿ ಫಸಲನ್ನು ರೂಢಿಸಿಕೊಳ್ಳಬೇಕು. ಟೆಂಡರ್ ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ತೋಟಗಾರಿಕೆ ನಿರ್ದೇಶಕರು ಪಡೆದಿರುತ್ತಾರೆ. ಇಲಾಖಾ ಅಧಿಕಾರಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ. ಹೆಚ್ಚಿನ ಪರಿಷ್ಕೃತ ನಿಯಮಾವಳಿಗಳ ವಿವರಗಳನ್ನು ನಿಬಂಧನೆ ಮತ್ತು ಷರತ್ತುಗಳನ್ನು ಈ ಕಛೇರಿಯಲ್ಲಿ ಅಥವಾ ಸಂಬಂಧಪಟ್ಟ ಕ್ಷೇತ್ರಗಳಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
(ರಾಜ್ಯವಲಯ) ಬೆಂಗಳೂರು (ಗ್ರಾ) ಜಿಲ್ಲೆ, ಕಬ್ಬನ್‌ಪಾರ್ಕ್, ಬೆಂಗಳೂರು-560001.

**ಅನುಬಂಧ**

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರ ಅಥವಾ ಸಸ್ಯಗಾರದ ಹೆಸರು | ಫಸಲಿನ ಹೆಸರು | ಗಿಡಗಳ ಸಂಖ್ಯೆ | ಫಸಲನ್ನು ರೂಢಿಸಿಕೊಳ್ಳುವ ಕೊನೆಯ ದಿನಾಂಕ | ಠೇವಣಿ ಹಣ ರೂ. | ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ನಡೆಸುವ ದಿನಾಂಕ ಮತ್ತು ವೇಳೆ |
|---|---|---|---|---|---|---|---|
| 1 | ಕನ್ನಮಂಗಲ ತೋ.ಕ್ಷೇತ್ರ, ಬೆಂಗಳೂರು ಪೂರ್ವ ತಾಲ್ಲೂಕು | ಮಾವು | 560 | 30.09.2006 | 1000-00 | 25.04.2006 3.00 ಗಂಟೆ | 25.04.2006 3.30 ಗಂಟೆ |
| 2 | ಕೆ.ಪೂಜೇನಹಳ್ಳಿ ತೋ.ಕ್ಷೇತ್ರ, ದೇವನಹಳ್ಳಿ ತಾಲ್ಲೂಕು | ಮಾವು | 885 | 30.09.2006 | 2000-00 | 26.04.2006 3.00 ಗಂಟೆ | 26.04.2006 3.30 ಗಂಟೆ |
| 3 | ಬಗಿನಗೆರೆಕಾವಲ್ ತೋ.ಕ್ಷೇತ್ರ ಮಾಗಡಿ ತಾಲ್ಲೂಕು | ಮಾವು | 1756 | 30.09.2006 | 5000-00 | 27.04.2006 3.00 ಗಂಟೆ | 27.04.2006 3.30 ಗಂಟೆ |

**ವಿಶೇಷ ಸೂಚನೆ:** ಟೆಂಡರ್ ನಡೆಯುವ ಸ್ಥಳ

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ,
(ರಾಜ್ಯವಲಯ) ಕಬ್ಬನ್‌ಪಾರ್ಕ್, ಬೆಂಗಳೂರು-01 (ವಿಶ್ವೇಶ್ವರಯ್ಯ ಮ್ಯೂಸಿಯಂ ಹಿಂಭಾಗ)

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,

ಪಿ.ಆರ್. 192 (ರಾಜ್ಯವಲಯ) ಬೆಂಗಳೂರು (ಗ್ರಾ) ಜಿಲ್ಲೆ, ಕಬ್ಬನ್‌ಪಾರ್ಕ್, ಬೆಂಗಳೂರು-560001.

## ಜಂಟಿ ಕೃಷಿ ನಿರ್ದೇಶಕರ ಕಛೇರಿ, ಹಾಸನ
## ಬಹಿರಂಗ ಹರಾಜು ಪ್ರಕಟಣೆ

**ಸಂಖ್ಯೆ: ಜಕೃನಿ:ಹಾ:ಲೆಕ್ಕ-3:ಜಡವಸ್ತು:ಬಹ:01:2006-07, ದಿನಾಂಕ: 3ನೇ ಏಪ್ರಿಲ್ 2006**

**ವಿಷಯ:** ಜಂಟಿ ಕೃಷಿ ನಿರ್ದೇಶಕರ ಕಛೇರಿಯಲ್ಲಿನ ಅನುಪಯುಕ್ತ ಸಿಂಗಲ್ ಡೀಸಲ್ ಜನರೇಟರ್ ಸೆಟ್ ಅನ್ನು ಟೆಂಡರ್-ಕಂ-ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** ಕೃಷಿ ನಿರ್ದೇಶಕರು, ಕೃಷಿ ಆಯುಕ್ತರ ಕಾರ್ಯಾಲಯ, ಬೆಂಗಳೂರು-1, ಇವರ ಅನುಮತಿ ಪತ್ರದ ಸಂಖ್ಯೆ: ಸಾಮಾನ್ಯ: ಜಡವಸ್ತು:ಅನುಪ:87:2005-06:20, ದಿನಾಂಕ: 25.03.2006.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಜಂಟಿ ಕೃಷಿ ನಿರ್ದೇಶಕರು, ಹಾಸನ ಇವರ ಕಛೇರಿಯಲ್ಲಿರುವ ಕೆಳಕಂಡ ಅನುಪಯುಕ್ತ ಒಂದು ಸಿಂಗಾಲ್ ಡೀಸೆಲ್ ಜನರೇಟರ್ ಸೆಟ್‌ನ್ನು ದಿನಾಂಕ: 25.05.2006ರ ಗುರುವಾರ ಬೆಳಿಗ್ಗೆ 11.00 ಗಂಟೆಗೆ ಕಛೇರಿಯ ಆವರಣದಲ್ಲಿ ಜಂಟಿ ಕೃಷಿ ನಿರ್ದೇಶಕರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯವರ ಸಮ್ಮುಖದಲ್ಲಿ ಬಹಿರಂಗ ಹರಾಜನ್ನು ಮಾಡಲಾಗುವುದು. ಆಸಕ್ತಿಯುಳ್ಳ ವ್ಯಕ್ತಿಗಳು ಸದರಿ ಹರಾಜಿನಲ್ಲಿ ಭಾಗವಹಿಸಿ ಬಿಡ್ ಮಾಡಲು ಕೋರಿದೆ.

**ಅನುಪಯುಕ್ತ ದಾಸ್ತಾನು ವಿವರ**

| ಕ್ರ.ಸಂ. | ದಾಸ್ತಾನು ವಿವರ | ಪ್ರಮಾಣ | ದಾಸ್ತಾನು ಪುಟ ಸಂಖ್ಯೆ : ಸಂಪುಟ | ಮುಖ ಬೆಲೆ |
|---|---|---|---|---|
| 1 | ಸಿಂಗಾಲ್ ಡೀಸೆಲ್ ಜನರೇಟರ್ ಸೆಟ್. | 01 (ಒಂದು) | 35:3 | ರೂ.27,386-00 |

**ಹರಾಜು ನಿಬಂಧನೆಗಳು:**

1) ಹರಾಜಿನಲ್ಲಿ ಭಾಗವಹಿಸುವವರು ಹರಾಜಿಗೆ ಮುನ್ನ ರೂ.1000-00 ಠೇವಣಿ ಇಡತಕ್ಕದ್ದು.
2) ಹರಾಜನ್ನು ಮಾಡುವ ದಿನಾಂಕ ಮತ್ತು ವೇಳೆಯಲ್ಲಿ ಯಾವುದೇ ಕಾರಣ ಕೊಡದೆ ರದ್ದುಗೊಳಿಸುವ, ಮುಂದೂಡುವ ಅಧಿಕಾರವು ಈ ಕೆಳಗೆ ಸಹಿ ಮಾಡಿದ ಕಛೇರಿ ಮುಖ್ಯಸ್ಥರಿಗಿರುತ್ತದೆ.
3) ಹರಾಜುದಾರರು ಹರಾಜಿನಲ್ಲಿ ಭಾಗವಹಿಸಿ ಮುಂಗಡವಾಗಿ ಕಟ್ಟಿಡ ಠೇವಣಿ ಹಣವನ್ನು ಹರಾಜಿನ ಕೊನೆಯಲ್ಲಿ ಹೆಚ್ಚು ಬಿಡ್ ಮಾಡಿದ ಹರಾಜುದಾರರನ್ನು ಹೊರತು ಪಡಿಸಿ, ಬಾಕಿ ಉಳಿದ ಹರಾಜುದಾರರಿಗೆ ದಿನಾಂಕ: 25.05.2006 ರಂದೇ ಹಿಂದಿರುಗಿಸಲಾಗುವುದು.
4) ಹೆಚ್ಚಿಗೆ ಬಿಡ್ ಮಾಡಿದ ಹರಾಜುದಾರರು ಮಾರಾಟ ತೆರಿಗೆಯನ್ನು ನಿಯಮಾನುಸಾರ ಕಟ್ಟಲು ಬದ್ಧರಾಗಿರತಕ್ಕದ್ದು.
5) ಹೆಚ್ಚಿನ ಬಿಡ್ ಮಾಡಿದ ಹರಾಜುದಾರರಿಗೆ ಸದರಿ ಅನುಪಯುಕ್ತ ವಸ್ತುವನ್ನು ಮೇಲಾಧಿಕಾರಿಗಳ ಮಂಜೂರಾತಿ ಪಡೆದ ನಂತರವೇ ವಿಲೇವಾರಿ (ಹಸ್ತಾಂತರ) ಮಾಡಲಾಗುವುದು.
6) ಹರಾಜಿನಲ್ಲಿ ಹೆಚ್ಚಿನ ಹಣ ಬಿಡ್ ಮಾಡಿದವರು ಪೂರ್ಣ ಹಣ ಪಾವತಿಸಿ, ಸ್ವಂತ ಖರ್ಚಿನಲ್ಲಿ ಬಿಡ್ ಮಾಡಿದ ಜನರೇಟರ್ ಅನ್ನು ತೆಗೆದು ಕೊಂಡು ಹೋಗತಕ್ಕದ್ದು, ತಪ್ಪಿದಲ್ಲಿ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಪಿ.ಆರ್. 193

ಜಂಟಿ ಕೃಷಿ ನಿರ್ದೇಶಕರು, ಹಾಸನ.

## ತೋಟಗಾರಿಕಾ ಇಲಾಖೆ
## ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರವರ ಕಛೇರಿ (ರಾಜ್ಯವಲಯ) ಕೋಲಾರ
## "ಮಾವು ಫಸಲಿನ ವಿಲೇವಾರಿಗೆ ಟೆಂಡರ್ ಪ್ರಕಟಣೆ"

**ಸಂಖ್ಯೆ: ಹಿಸತೋನಿ:ರಾವ:ಕೋ:ಸತೋಅ:87:2005-06, ದಿನಾಂಕ: 21ನೇ ಮಾರ್ಚ್ 2006**

2006ನೇ ಸಾಲಿನ ದಿನಾಂಕ: 1.1.2006 ರಿಂದ 31.8.2006 ರವರೆಗಿನ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ) ಕೋಲಾರ ರವರ ಅಧೀನದಲ್ಲಿ ಬರುವ ಈ ಕೆಳಕಂಡ ತೋಟಗಾರಿಕೆ ಕ್ಷೇತ್ರಗಳ ಮಾವು ಮತ್ತು ಗೋಡಂಬಿ ಫಸಲನ್ನು ಟೆಂಡರ್ ಮೂಲಕ ವಿಲೇವಾರಿ ಮಾಡಲಾಗುವುದು. ಅದರಂತೆ ಟೆಂಡರ್ ನಡೆಸುವ ಸ್ಥಳ, ದಿನಾಂಕ ಮತ್ತು ಸಮಯವನ್ನು ನಿಗದಿಪಡಿಸಿ, ಪ್ರಕಟಣೆ ಹೊರಡಿಸಿದೆ. ಆಸಕ್ತಿಯುಳ್ಳ ಸಾರ್ವಜನಿಕರು ಮತ್ತು ಹಣ್ಣಿನ ವ್ಯಾಪಾರಿಗಳು ಸರಿಯಾದ ಸಮಯಕ್ಕೆ ಹಾಜರಿದ್ದು, ಟೆಂಡರ್‌ನಲ್ಲಿ ಭಾಗವಹಿಸಲು ಕೋರಲಾಗಿದೆ.

| ಕ್ರ. ಸಂ. | ಕ್ಷೇತ್ರ ಹೆಸರು | ಫಸಲಿನ ಹೆಸರು | ಮರಗಳ ಸಂಖ್ಯೆ | ಹರಾಜು ನಡೆಸುವ ವಿಧಾನ | ಠೇವಣಿ ಮೊತ್ತ | ಟೆಂಡರ್ ನಡೆಸುವ ಸ್ಥಳ ದಿನಾಂಕ ಮತ್ತು ಸಮಯ |
|---|---|---|---|---|---|---|
| 1 | ಪಿಆರ್‌ಎಸ್ ತೋಟಗಾರಿಕೆ ಕ್ಷೇತ್ರ ನಂದಿಕ್ರಾಸ್, ಚಿಕ್ಕಬಳ್ಳಾಪುರ. | ಮಾವು | 354 | ಟೆಂಡರ್ ಮಾತ್ರ | 2000-00 | ದಿನಾಂಕ: 22.04.2006 ಮಧ್ಯಾಹ್ನ: 3.00 ಗಂಟೆ ಸ್ಥಳ: ಕೋಲಾರ |
| 2 | ಚಿಕ್ಕದಾಸರಹಳ್ಳಿ ಮಾವು ಕ್ಷೇತ್ರ ಶಿಡ್ಲಘಟ್ಟ ತಾಲ್ಲೂಕು. | ಮಾವು | 856 | ಟೆಂಡರ್ ಮಾತ್ರ | 5000-00 | ದಿನಾಂಕ: 24.04.2006 ಮಧ್ಯಾಹ್ನ: 3.00 ಗಂಟೆ ಸ್ಥಳ: ಕೋಲಾರ |
| 3 | ಹೊಗಳಗೆರೆ ಕ್ಷೇತ್ರ ಶ್ರೀನಿವಾಸಪುರ ತಾಲ್ಲೂಕು. | ಮಾವು | 3326 | ಟೆಂಡರ್ ಮಾತ್ರ | 5000-00 | ದಿನಾಂಕ: 26.04.2006 ಮಧ್ಯಾಹ್ನ: 3.00 ಗಂಟೆ ಸ್ಥಳ: ಕೋಲಾರ |
| 4 | ಜೋಡಿವಮ್ಮ ಸಂದ್ರ ಕ್ಷೇತ್ರ ಮುಳಬಾಗಿಲು | ಮಾವು | 1650 | ಟೆಂಡರ್ ಮಾತ್ರ | 2000-00 | ದಿನಾಂಕ: 27.04.2006 ಮಧ್ಯಾಹ್ನ: 3.00 ಗಂಟೆ ಸ್ಥಳ: ಕೋಲಾರ |

ಮೇಲಿನ ಕ್ಷೇತ್ರದ ಫಸಲಿನ ಟೆಂಡರ್ ಅನುಮೋದನೆಯಾದ ದಿನಾಂಕದಿಂದ 10 ದಿನಗಳೊಳಗಾಗಿ ಪೂರ್ಣ ಮೊತ್ತವನ್ನು ಪಾವತಿಸಿ, ಫಸಲನ್ನು ರೂಡಿಸಿಕೊಳ್ಳಬಹುದಾಗಿರುತ್ತದೆ. ಸದರಿ ಟೆಂಡರ್ ಪ್ರಕ್ರಿಯೆಯನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ತೋಟಗಾರಿಕೆ ನಿರ್ದೇಶಕರು ಪಡೆದಿರುತ್ತಾರೆ. ಇಲಾಖೆಯ ಅಧಿಕಾರಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ. ಹೆಚ್ಚಿನ ವಿವರಗಳನ್ನು ಈ ಕೆಳಸಹಿದಾರರ ಕಛೇರಿಯಲ್ಲಿ ಅಥವಾ ಸಂಬಂಧಪಟ್ಟ ಕ್ಷೇತ್ರಗಳ ಅಧಿಕಾರಿಗಳಲ್ಲಿ, ಕಛೇರಿ ವೇಳೆಯಲ್ಲಿ ಪಡೆಯಬಹುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
(ರಾಜ್ಯವಲಯ) ಕೋಲಾರ.

ಪಿ.ಆರ್. 194

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

### ಟೆಂಡರ್ ಪ್ರಕಟಣೆ

**ಸಂಖ್ಯೆ: ಸಿಆಸುಇ 39 ಡಿಟಿಎಂ 2006, ಬೆಂಗಳೂರು, ದಿನಾಂಕಃ 3ನೇ ಏಪ್ರಿಲ್ 2006**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ವಿವಿಧ ಕಚೇರಿಗಳಲ್ಲಿ ಈ ಕೆಳಕಂಡ ವಿವಿಧ ಸಂಸ್ಥೆಯ ವಿವಿಧ ಮಾದರಿಯ ಡಿಜಿಟಲ್ ಪ್ರಿಂಟರ್, ಡಿಜಿಟಲ್ ಕಾಪಿಯರ್ ಮತ್ತು ಡಿಜಿಟಲ್ ಡೂಪ್ಲಿಕೇಟರ್ ಯಂತ್ರಗಳಿದ್ದು, ಇವುಗಳ ವಿಸ್ತಾರವಾದ (Comprehensive) ವಾರ್ಷಿಕ ಸೇವಾ ನಿರ್ವಹಣೆಯನ್ನು ವಹಿಸಲು ಸರ್ಕಾರವು ಉದ್ದೇಶಿಸಿ ಮೊಹರಾದ ಟೆಂಡರ್‌ಗಳನ್ನು ಅಹ್ವಾನಿಸಿದೆ.

| ಕ್ರ.ಸಂ | ಇಲಾಖೆ:ಶಾಖೆ | ಯಂತ್ರದ ಮೂಲ ಸಂಸ್ಥೆ | ಯಂತ್ರದ ಮಾದರಿ |
|---|---|---|---|
| 1 | ಲೋಕೋಪಯೋಗಿ ಇಲಾಖೆ (ಸ್ವೀಮರ) | ಹೆಚ್‌ಸಿಎಲ್ | ಡಿಪಿ 21 ಎಸ್ |
| 2 | ಶಿಕ್ಷಣ ಇಲಾಖೆ (ಸ್ವೀಮರ) | ಹೆಚ್‌ಸಿಎಲ್ | ಡಿಪಿ 2030 |
| 3 | ಕಂದಾಯ ಇಲಾಖೆ (ಸ್ವೀಮರ) | ಹೆಚ್‌ಸಿಎಲ್ | ಡಿಪಿ 2030 |
| 4 | ಕೃ ಮತ್ತು ತೋ ಇಲಾಖೆ (ಸ್ವೀಮರ) | ಹೆಚ್‌ಸಿಎಲ್ | ಡಿಪಿ 31 ಎಸ್ |
| 5 | ಸಿಆಸುಇ (ಬಹುಪ್ರತಿ ವಿಭಾಗ) | ಹೆಚ್‌ಸಿಎಲ್ | ಡಿಪಿ 430 |
| 6 | ಸಿಆಸುಇ (ಆಡಳಿತ ಸುಧಾರಣೆ) | ಹೆಚ್‌ಸಿಎಲ್ | ಡಿಪಿ 23 ಎಸ್ |
| 7 | ಪ್ರ.ಕಾ ರವರ ಕಚೇರಿ, ಲೋಕೋಪಯೋಗಿ ಇಲಾಖೆ | ಹೆಚ್‌ಸಿಎಲ್ | ಡಿಪಿ 2570 |
| 8 | ಮೂಲಭೂತ ಸೌಲಭ್ಯ ಅಭಿವೃದ್ಧಿ ಇಲಾಖೆ | ಹೆಚ್‌ಸಿಎಲ್ | ಡಿಪಿ 3580 |
| 9 | ಕರ್ನಾಟಕ ಮಹಾರಾಷ್ಟ್ರ ಗಡಿನಾಡು ಸಲಹಾ ಸಮಿತಿ | ಹೆಚ್‌ಸಿಎಲ್ | ಡಿಪಿ 2570 |
| 10 | ಶಿಕ್ಷಣ ಇಲಾಖೆ (ಸ್ವೀಮರ) | ಗೆಸ್ಟೇಟ್ನರ್ | 5327 |
| 11 | ಸಚಿವ ಸಂಪುಟ ಶಾಖೆ | ಗೆಸ್ಟೇಟ್ನರ್ | 5327 |
| 12 | ವಾ ಮತ್ತು ಕೈ ಇಲಾಖೆ (ಸ್ವೀಮರ) | ಗೆಸ್ಟೇಟ್ನರ್ | 5308 ಬಿಸ್ |
| 13 | ಕಾರ್ಯದರ್ಶಿ, ಸಿಆಸುಇ (ಇ–ಆಡಳಿತ) ರವರ ಕಚೇರಿ | ಗೆಸ್ಟೇಟ್ನರ್ | 3222 ಜಿ |
| 14 | ಕಂದಾಯ ಇಲಾಖೆ (ಸ್ವೀಮರ) | ರಿಸೋ | ಟಿಆರ್ 1530 |
| 15 | ವಸತಿ ಇಲಾಖೆ (ಸ್ವೀಮರ) | ರಿಸೋ | ಜಿಆರ್ 1750 |

ಇಚ್ಛೆಯುಳ್ಳವರು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ) ಕೊಠಡಿ ಸಂಖ್ಯೆ: 25, ನೆಲಮಹಡಿ, ವಿಧಾನಸೌಧ ಇಲ್ಲಿ ರೂ. 100.00 + ಶೇಕಡ 12.5 ರಂತೆ ಮಾರಾಟ ತೆರಿಗೆಯನ್ನು ಅಂದರೆ ಒಟ್ಟು ರೂ. 114.00 ಗಳನ್ನು ನಗದು ಅಥವಾ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ನೀಡಿ ರಸೀದಿಯನ್ನು ಪಡೆದು ಅನಂತರ ಟೆಂಡರ್ ನಮೂನೆಯನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ (ಕಾರ್ಯಕಾರಿ – 1), ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಇಲ್ಲಿ ರಸೀದಿಯನ್ನು ತೋರಿಸಿ ಪಡೆದುಕೊಳ್ಳಹುದು. ದಿನಾಂಕಃ 02–05–2006 ರಂದು ಮಧ್ಯಾಹ್ನ 3:30 ಗಂಟೆಯವರೆಗೆ ಟೆಂಡರ್ ಅರ್ಜಿಗಳನ್ನು ನೀಡಲಾಗುವುದು. ಈ ಟೆಂಡರ್ ನಮೂನೆಗೆ ನೀಡಿದ ಮೊತ್ತವನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕಃ 03–05–2006 ರಂದು ಮಧ್ಯಾಹ್ನ 3:30 ಗಂಟೆ. ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಟೆಂಡರ್ ಬುಲಿಟಿನ್ ಅಧಿಕಾರಿಯವರು ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು–560 001 ಇಲ್ಲಿ ಟೆಂಡರ್‌ದಾರರ ಸಮ್ಮುಖದಲ್ಲಿ ದಿನಾಂಕಃ 03–05–2006 ರಂದು ಮಧ್ಯಾಹ್ನ 4:30 ಗಂಟೆಗೆ ತೆರೆಯಲಾಗುವುದು. ಟೆಂಡರ್ ತೆರೆಯುವ ದಿನಾಂಕವು ಯಾವುದಾದರೂ ಸಾರ್ವತ್ರಿಕ ರಜಾ ದಿನವಾದಲ್ಲಿ ಮಾರನೆಯ ಕೆಲಸದ ದಿನ ಅದೇ ವೇಳೆ ಮತ್ತು ಅದೇ ಸ್ಥಳದಲ್ಲಿ ತೆರೆಯಲಾಗುವುದು.

1) ಟೆಂಡರ್ ಅರ್ಜಿಗಳನ್ನು ಈ ಕಛೇರಿಯಿಂದಲೇ ಖರೀದಿಸಿ ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.
2) ಮೊಹರಾದ ಟೆಂಡರ್ ಲಕೋಟೆಯ ಮೇಲೆ "ಡಿಜಿಟಲ್ ಪ್ರಿಂಟರ್:ಡಿಜಿಟಲ್ ಕಾಪಿಯರ್ ಯಂತ್ರಗಳ ವಾರ್ಷಿಕ ಸೇವಾ ನಿರ್ವಹಣೆ ದರಪಟ್ಟಿ" ಎಂದು ಬರೆಯತಕ್ಕದ್ದು.
3) ಟೆಂಡರ್‌ದಾರರು ಈಗಾಗಲೇ ಇಂತಹ ಡಿಜಿಟಲ್ ಪ್ರಿಂಟರ್:ಡಿಜಿಟಲ್ ಕಾಪಿಯರ್ ಯಂತ್ರಗಳ ವಾರ್ಷಿಕ ಸೇವಾ ನಿರ್ವಹಣೆ ಮಾಡುತ್ತಿರುವುದಕ್ಕೆ ದಾಖಲೆ:ಮಾಹಿತಿಯನ್ನು ಟೆಂಡರ್‌ನೊಂದಿಗೆ ಲಗತ್ತಿಸಿರಬೇಕು.

4) ದರಪಟ್ಟಿಯನ್ನು ನೀಡುವ ಸಂಸ್ಥೆಗಳು ಈ ಮೇಲ್ಕಂಡ ಯಂತ್ರಗಳ ದುರಸ್ಥಿಗೆ ಬೇಕಾಗುವ ಬಿಡಿ ಭಾಗಗಳ ದಾಸ್ತಾನಿನ ಬಗ್ಗೆ ಮಾಹಿತಿ ನೀಡಬೇಕು.
5) ಪ್ರತಿ ನಮೂನೆಯ ಯಂತ್ರಕ್ಕೂ ವಾರ್ಷಿಕ ಸೇವಾ ನಿರ್ವಹಣೆ ದರ ಸೂಚಿಸಬೇಕು (Comprehensive) ಹಾಗೂ ಸೂಚಿಸಿದ ದರಕ್ಕೆ ತೆರಿಗೆಗಳಿದ್ದಲ್ಲಿ ಪ್ರತ್ಯೇಕ ನಮೂದಿಸಬೇಕು.
6) ಮುಂಗಡ ಠೇವಣಿ (ಇ.ಎಂ.ಡಿ) ಮೊತ್ತ ರೂ. 5000.00 ಗಳ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಿಆಸುಇ (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು-560 001 ಇವರಿಗೆ ಸಂಭೋದಿಸಿ ಲಗತ್ತಿಸತಕ್ಕದ್ದು, ಮೂಲ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
7) ದರಪಟ್ಟಿಯೊಂದಿಗೆ ಮೌಲ್ಯವರ್ಧಿತ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ಹಾಗೂ ಆದಾಯ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ಸಲ್ಲಿಸತಕ್ಕದ್ದು. ದರಪಟ್ಟಿಯೊಂದಿಗೆ ವ್ಯಾಟ್ ರಿಜಿಸ್ಟ್ರೇಷನ್ ಬಗ್ಗೆ ಮಾಹಿತಿಯನ್ನು ಒದಗಿಸುವುದು.
8) ವಾರ್ಷಿಕ ಸೇವಾ ನಿರ್ವಹಣೆಯನ್ನು ವಹಿಸಿದಲ್ಲಿ ದೂರಾರು ಬಂದಾಗ ದುರಸ್ಥಿ ಪಡಿಸುವುದಲ್ಲದೆ, ಕನಿಷ್ಟ ತಿಂಗಳಿಗೆ ಎರಡು ಬಾರಿ ತಂತ್ರಜ್ಞರಿಂದ ನಿರೋಧಾತ್ಮಕ ನಿರ್ವಹಣೆ (Preventive Maintenance) ಮಾಡಿಸತಕ್ಕದ್ದು, ಒಬ್ಬ ತಂತ್ರಜ್ಞರನ್ನು ಖಾಯಂ ಆಗಿ ವಾರ್ಷಿಕ ಸೇವಾ ನಿರ್ವಹಣೆ ಅವಧಿಯಲ್ಲಿ ಸಚಿವಾಲಯಕ್ಕೆ ನಿಯೋಜಿಸುವುದು.
9) ತೃಪ್ತಿಕರವಾಗಿ ಸರ್ವೀಸ್ ಮಾಡಿದ ಬಗ್ಗೆ ಧೃಡೀಕರಣದ ಆಧಾರದ ಮೇಲೆ ಪ್ರತಿ ಮೂರು ತಿಂಗಳಿಗೊಮ್ಮೆ ನಾಲ್ಕು ಸಮಾನ ಕಂತುಗಳಲ್ಲಿ ಸೇವಾ ಹಣವನ್ನು ಸಂದಾಯ ಮಾಡಲಾಗುವುದು.

ಇನ್ನು ಹೆಚ್ಚಿನ ವಿವರಗಳಿಗೆ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1) ಇವರನ್ನು ಕಛೇರಿ ವೇಳೆಯಲ್ಲಿ ಖುದ್ದಾಗಿ ಅಥವಾ ದೂರವಾಣಿ ಸಂಖ್ಯೆ: 22033440 ಅಥವಾ 22033487 ರಲ್ಲಿ ಸಂಪರ್ಕಿಸಬಹುದು.

**ಹೆಚ್.ಕೆ. ರವಿಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಕಾರ್ಯಕಾರಿ-1)

**ಟೆಂಡರ್ ನಮೂನೆ**

ಟೆಂಡರ್ ನಮೂನೆ ಸಂಖ್ಯೆ:

**ವಿಷಯ:** ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿರುವ ಡಿಜಿಟಲ್ ಪ್ರಿಂಟರ್:ಡಿಜಿಟಲ್ ಕಾಪಿಯರ್ ಯಂತ್ರಗಳ ವಾರ್ಷಿಕ ಸೇವಾ ನಿರ್ವಹಣೆಯ ಬಗ್ಗೆ ಟೆಂಡರ್

| | | |
|---|---|---|
| ಟೆಂಡರ್‌ಗಳನ್ನು ಸಲ್ಲಿಸಬೇಕಾದ ವಿಳಾಸ | : | ಸರ್ಕಾರದ ಅಧೀನ ಕಾರ್ಯದರ್ಶಿ<br>ಸಿಆಸುಇ (ಕಾರ್ಯಕಾರಿ-1)<br>ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು-560 001. |
| ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ | : | 03-05-2006 ಮಧ್ಯಾಹ್ನ 3:30 ಗಂಟೆಯೊಳಗೆ |
| ಟೆಂಡರ್ ತೆರೆಯುವ ದಿನಾಂಕ | : | 03-05-2006 ಮಧ್ಯಾಹ್ನ 4:30 ಗಂಟೆಗೆ.<br>ಟೆಂಡರ್ ತೆರೆಯುವ ದಿನಾಂಕವು ಯಾವುದಾದರೂ ಸಾರ್ವತ್ರಿಕ ರಜಾ ದಿನವಾದಲ್ಲಿ ಮಾರನೆಯ ಕೆಲಸದ ದಿನ ಅದೇ ವೇಳೆ ಮತ್ತು ಅದೇ ಸ್ಥಳದಲ್ಲಿ ತೆರೆಯಲಾಗುವುದು. |
| ಟೆಂಡರ್ ಫಾರಂ ದರ | : | ರೂ. 100.00 + ಶೇಕಡ 12.5 ಮೌಲ್ಯವರ್ಧಿತ ತೆರಿಗೆ<br>(ರೂಪಾಯಿ ಒಂದು ನೂರ ಹದಿನಾಲ್ಕು ಮಾತ್ರ) |

ಟೆಂಡರ್‌ದಾರರ ಗಮನಕ್ಕೆ:

1. ಟೆಂಡರ್ ಲಕೋಟೆಯ ಮೇಲೆ "ಡಿಜಿಟಲ್ ಪ್ರಿಂಟರ್:ಡಿಜಿಟಲ್ ಕಾಪಿಯರ್ ಯಂತ್ರಗಳ ವಾರ್ಷಿಕ ಸೇವಾ ನಿರ್ವಹಣೆ ದರಪಟ್ಟಿ" ಎಂದು ಹಾಗೂ ಟೆಂಡರ್ ಪ್ರಕಟಣೆಯ ಸಂಖ್ಯೆ, ದಿನಾಂಕ ಕಡ್ಡಾಯವಾಗಿ ಬರೆಯತಕ್ಕದ್ದು.
2. ದರಗಳನ್ನು ಇದರೊಂದಿಗೆ ಲಗತ್ತಿಸಿರುವ ನಮೂನೆಯಲ್ಲಿಯೇ ನೀಡತಕ್ಕದ್ದು.
3. ನಮೂದಿಸುವ ದರವು ತೆರಿಗೆ, ಸಾಗಾಣಿಕೆ ಇತ್ಯಾದಿಗಳನ್ನು ಒಳಗೊಂಡಿರಬೇಕು.
4. ಪ್ರತಿ ನಮೂನೆಯ ಯಂತ್ರಕ್ಕೂ ವಾರ್ಷಿಕ ಸೇವಾ ನಿರ್ವಹಣೆ ದರ ಸೂಚಿಸಬೇಕು (Comprehensive) ಡ್ರಮ್, ಡೆವಲಪರ್ ಹಾಗೂ ಟೋನರ್ ಹೊರತುಪಡಿಸಿ ಉಳಿದ ಎಲ್ಲಾ ಬಿಡಿಭಾಗಗಳನ್ನೊಳಗೊಂಡಿರಬೇಕು ಹಾಗೂ ಸೂಚಿಸಿದ ದರಕ್ಕೆ ತೆರಿಗೆಗಳಿದ್ದಲ್ಲಿ ಪ್ರತ್ಯೇಕ ನಮೂದಿಸಬೇಕು.
5. ವಾರ್ಷಿಕ ಸೇವಾ ನಿರ್ವಹಣೆ ವೆಚ್ಚದಿಂದ ಚಾಲ್ತಿಯಲ್ಲಿರುವ ತೆರಿಗೆಯನ್ನು ಬಿಲ್ಲು ಮೊತ್ತದಿಂದ ಕಡಿತಗೊಳಿಸಿ ಸರ್ಕಾರ ನೇರವಾಗಿ ಪಾವತಿಸುವುದು.
6. ದರಪಟ್ಟಿಯನ್ನು ನೀಡುವ ಸಂಸ್ಥೆಗಳು ಈ ಮೇಲ್ಕಂಡ ಯಂತ್ರಗಳ ದುರಸ್ಥಿಗೆ ಬೇಕಾಗುವ ಬಿಡಿ ಭಾಗಗಳ ದಾಸ್ತಾನಿನ ಬಗ್ಗೆ ಮಾಹಿತಿ ನೀಡಬೇಕು.
7. ದರಪಟ್ಟಿಯೊಂದಿಗೆ ಮೌಲ್ಯವರ್ಧಿತ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ಹಾಗೂ ಆದಾಯ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ಸಲ್ಲಿಸತಕ್ಕದ್ದು. ದರಪಟ್ಟಿಯೊಂದಿಗೆ ವ್ಯಾಟ್ ರಿಜಿಸ್ಟ್ರೇಷನ್ ಬಗ್ಗೆ ಮಾಹಿತಿಯನ್ನು ಒದಗಿಸುವುದು.

8. ವಾರ್ಷಿಕ ಸೇವಾ ನಿರ್ವಹಣೆಯನ್ನು ವಹಿಸಿದಲ್ಲಿ ದೂರು ಬಂದಾಗ ದುರಸ್ಥಿ ಪಡಿಸುವುದಲ್ಲದೆ, ಕನಿಷ್ಟ ತಿಂಗಳಿಗೆ ಎರಡು ಬಾರಿ ತಂತ್ರಜ್ಞರಿಂದ ನಿರೋಧಾತ್ಮಕ ನಿರ್ವಹಣೆ (Preventive Maintenance) ಮಾಡಿಸತಕ್ಕದ್ದು, ಒಬ್ಬ ತಂತ್ರಜ್ಞರನ್ನು ಖಾಯಂ ಆಗಿ ವಾರ್ಷಿಕ ಸೇವಾ ನಿರ್ವಹಣೆ ಅವಧಿಯಲ್ಲಿ ಸಚಿವಾಲಯಕ್ಕೆ ನಿಯೋಜಿಸುವುದು. ತೃಪ್ತಿಕರವಾಗಿ ಸರ್ವೀಸ್ ಮಾಡಿದ ಬಗ್ಗೆ ದೃಢೀಕರಣ ಆಧಾರದ ಮೇಲೆ ಪ್ರತಿ ಮೂರು (03) ತಿಂಗಳಿಗೊಮ್ಮೆ ನಾಲ್ಕು (04) ಸಮಾನ ಕಂತುಗಳಲ್ಲಿ ಸಂದಾಯ ಮಾಡಲಾಗುವುದು.
9. ಮುಂಗಡ ಠೇವಣಿ (ಇ.ಎಂ.ಡಿ) ಮೊತ್ತ ರೂ. 5000.00 ಗಳ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಿಆಸುಇ (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು–560 001 ಇವರಿಗೆ ಸಂಭೋದಿಸಿ ಲಗತ್ತಿಸತಕ್ಕದ್ದು, ಮೂಲ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
10. ಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ. ಮೊತ್ತವನ್ನು ವಾರ್ಷಿಕ ಸೇವಾ ನಿರ್ವಹಣೆಯ ಅವಧಿಯು ಮುಕ್ತಾಯಗೊಂಡ ನಂತರ ಅವರ ಕಾರ್ಯನಿರ್ವಹಣೆ ಬಗ್ಗೆ ಯಾವುದೇ ದೂರು ಇಲ್ಲದಿದ್ದಲ್ಲಿ ಷರತ್ತುಗಳ ಉಲ್ಲಂಘನೆ ಆಗಿರದಿದ್ದಲ್ಲಿ ಮಾತ್ರ ವಾಪಸ್ಸು ಮಾಡಲಾಗುವುದು. ಇದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.
11. ಅಯಶಸ್ಸು ಟೆಂಡರ್‌ದಾರರ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಹಿಂದಿರುಗಿಸಲಾಗುವುದು. ಅದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.
12. ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕಃ 03–05–2006 ರಂದು ಮಧ್ಯಾಹ್ನ 3:30 ಗಂಟೆಯೊಳಗೆ ಸಿ.ಆ.ಸು.ಇ (ಕಾರ್ಯಕಾರಿ), ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಬೆಂಗಳೂರು–560 001 ಈ ಕಛೇರಿಗೆ ಸಲ್ಲಿಸತಕ್ಕದ್ದು, ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
13. ದರಪಟ್ಟಿಯೊಂದಿಗೆ ಠೇವಣಿಯನ್ನು (ಇ.ಎಂ.ಡಿ.) ಮೊತ್ತ ನೀಡದಿದ್ದಲ್ಲಿ ಮತ್ತು ಮೇಲಿನ ಅಂಶಗಳಿಗೆ ಪೂರ್ಣ ವಿವರವನ್ನು ನೀಡದಿದ್ದಲ್ಲಿ ಅಂತಹ ಟೆಂಡರ್ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಯಾವುದೇ ಕಾರಣವನ್ನು ನೀಡದೇ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಸ್ವೀಕರಿಸುವ ಸಮರ್ಥ ಅಧಿಕಾರಿಯವರು ಕಾಯ್ದಿರಿಸಿಕೊಂಡಿದ್ದಾರೆ. ಇವರ ನಿರ್ಣಯವೇ ಅಂತಿಮವಾದದ್ದು.

**ಹೆಚ್.ಕೆ. ರವಿಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಕಾರ್ಯಕಾರಿ–1)

**ಅನುಬಂಧ**

**ಟೆಂಡರ್ ಪ್ರಕಟಣೆ ಸಂಖ್ಯೆ: ಸಿಆಸುಇ 39 ಡಿಟಿಎಂ 2006**

**ವಾರ್ಷಿಕ ಸೇವಾ ನಿರ್ವಹಣೆಯ ದರ**

| ಕ್ರ.ಸಂ. | ಯಂತ್ರದ ನಮೂನೆ | ದರ ರೂ. (ಒಂದು ಯಂತ್ರಕ್ಕೆ) | ತೆರಿಗೆ |
|---|---|---|---|
| 1 | ಹೆಚ್‌ಸಿಎಲ್ ಡಿಪಿ 21 ಎಸ್ | | |
| 2 | ಹೆಚ್‌ಸಿಎಲ್ ಡಿಪಿ 2030 | | |
| 3 | ಹೆಚ್‌ಸಿಎಲ್ ಡಿಪಿ 2030 | | |
| 4 | ಹೆಚ್‌ಸಿಎಲ್ ಡಿಪಿ 31 ಎಸ್ | | |
| 5 | ಹೆಚ್‌ಸಿಎಲ್ ಡಿಪಿ 430 | | |
| 6 | ಹೆಚ್‌ಸಿಎಲ್ ಡಿಪಿ 23 ಎಸ್ | | |
| 7 | ಹೆಚ್‌ಸಿಎಲ್ ಡಿಪಿ 2570 | | |
| 8 | ಹೆಚ್‌ಸಿಎಲ್ ಡಿಪಿ 3580 | | |
| 9 | ಹೆಚ್‌ಸಿಎಲ್ ಡಿಪಿ 2570 | | |
| 10 | ಗೆಸ್ಟೆಟ್ನರ್ 5327 | | |
| 11 | ಗೆಸ್ಟೆಟ್ನರ್ 5327 | | |
| 12 | ಗೆಸ್ಟೆಟ್ನರ್ 5308 ಬಿಎಸ್ | | |
| 13 | ಗೆಸ್ಟೆಟ್ನರ್ 3222 ಜಿ | | |
| 14 | ರಿಸೋ ಟಿಆರ್ 1530 | | |
| 15 | ರಿಸೋ ಜಿಆರ್ 1750 | | |

ಟೆಂಡರ್‌ದಾರರ ಸಹಿ
(ಪೂರ್ಣ ಹೆಸರು ವಿಳಾಸ ಮೊಹರಿನೊಂದಿಗೆ)

**ಹೆಚ್.ಕೆ. ರವಿಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಕಾರ್ಯಕಾರಿ–1)

ಪಿ.ಆರ್. 196

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು

**ಟೆಂಡರ್ ಪ್ರಕಟಣೆ ಸಂಖ್ಯೆ: ತೋಇ:ಹಿಸತೋನಿ:ಪುವಿ:ಸತೋಅ:2:2006-07, ದಿನಾಂಕ: 20ನೇ ಮಾರ್ಚ್ 2006**

**ವಿಷಯ:** 2006-07ನೇ ಸಾಲಿಗೆ ನಗರೂರು ಮಾದರಿ ಪುಷ್ಪಾಭಿವೃದ್ಧಿ ಕೇಂದ್ರ ಹಾಗೂ ಪುಷ್ಪಾಭಿವೃದ್ಧಿ ಕೇಂದ್ರ ಲಾಲ್‌ಬಾಗ್‌ನಲ್ಲಿ ತೋಟಗಾರಿಕೆ ಕೆಲಸಗಳನ್ನು ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುವ ಬಗ್ಗೆ.

2006-07ನೇ ಸಾಲಿಗೆ ನಗರೂರು ಮಾದರಿ ಪುಷ್ಪಾಭಿವೃದ್ಧಿ ಕೇಂದ್ರ ಹಾಗೂ ಪುಷ್ಪಾಭಿವೃದ್ಧಿ ವಿಭಾಗ, ಲಾಲ್‌ಬಾಗ್‌ನಲ್ಲಿ ತೋಟಗಾರಿಕೆ ಕೆಲಸಗಳಾದ ನೀರು ಹಾಕುವುದು, ಅಗತೆ ಮಾಡುವುದು, ಕಳೆ ತೆಗೆಯುವುದು, ಸಸಿಮಡಿ ಮಾಡುವುದು, ಪಾತಿ ಮಾಡುವುದು, ಟ್ರೆಂಚ್ ಮಾಡುವುದು, ಸಸಿ ನೆಡುವುದು, ಗಡ್ಡೆ ನೆಡುವುದು, ಗೊಬ್ಬರ ಹಾಕುವುದು, ಸಸ್ಯ ಸಂರಕ್ಷಣೆ ಔಷಧಿ ಸಿಂಪರಣೆ ಮಾಡುವುದು, ಪಾಟಿಂಗ್, ಸಸ್ಯಾಭಿವೃದ್ಧಿ ಮಾಡುವುದು, ಪಾಲಿಥೀನ್ ಬ್ಯಾಗ್‌ಗೆ ಗೊಬ್ಬರ ಹಾಕುವ ಕೆಲಸ ಇತ್ಯಾದಿಗಳನ್ನು ಗುತ್ತಿಗೆ ಮೇಲೆ ಮಾಡಲು ಇಚ್ಛಿಸುವ ಸಂಸ್ಥೆ ಅಥವಾ ವ್ಯಕ್ತಿಗಳಿಂದ ಟೆಂಡರ್‌ಅನ್ನು ಆಹ್ವಾನಿಸಲಾಗಿದೆ ಆಸಕ್ತಿಯುಳ್ಳ ಸಂಸ್ಥೆ/ವ್ಯಕ್ತಿಗಳು ತಮ್ಮ ಅತೀ ಕಡಿಮೆ ದರವನ್ನು ನಮೂದಿಸಿ ಮೊಹರಾದ ಟೆಂಡರ್‌ಅನ್ನು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ಪುಷ್ಪಾಭಿವೃದ್ಧಿ ವಿಭಾಗ) ಲಾಲ್‌ಬಾಗ್, ಬೆಂಗಳೂರುರವರಿಗೆ ಕಳುಹಿಸತಕ್ಕದ್ದು. ಮೊಹರಾದ ಲಕೋಟೆಯ ಮೇಲೆ "ತೋಟಗಾರಿಕೆ ಕೆಲಸಗಳನ್ನು ಗುತ್ತಿಗೆ ಮೇಲೆ ಮಾಡಲು ಟೆಂಡರ್" ಎಂದು ನಮೂದಿಸತಕ್ಕದ್ದು.

ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛಿಸುವವರು ನಿಗದಿತ ಟೆಂಡರ್ ಫಾರಂ ಅಲ್ಲದೆ ಇತರೆ ಯಾವುದೇ ರೀತಿಯಲ್ಲಿ ಟೆಂಡರ್ ಸಲ್ಲಿಸಿದ್ದರೆ ಅದನ್ನು ಮುಟ್ಟುಗೋಲು ಹಾಕಿ ಕೊಳ್ಳಲಾಗುವುದು.

ತೋಟಗಾರಿಕೆ ಕೆಲಸಗಳನ್ನು ಗುತ್ತಿಗೆ ಮೇಲೆ ನಿರ್ವಹಿಸಲು ಅತೀ ಕಡಿಮೆ ದರವನ್ನು ಟೆಂಡರ್ ಫಾರಂನಲ್ಲಿ ನಮೂದಿಸಿ, ಇದರ ಜೊತೆಗೆ ಟೆಂಡರ್ ಹಾಕುವ ಕೆಲಸಗಳ ಒಟ್ಟು ಮೌಲ್ಯದ ಹಣಕ್ಕೆ ಶೇ.2 ರಂತೆ ಭದ್ರತಾ ಹಣವನ್ನು ಬ್ಯಾಂಕ್ ಡಿಮಾಂಡ್ ಡ್ರಾಫ್ಟ್ ಮೂಲಕ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಪುಷ್ಪಾಭಿವೃದ್ಧಿ) ಲಾಲ್‌ಬಾಗ್, ಬೆಂಗಳೂರುರವರ ಹೆಸರಿನಲ್ಲಿ ಪಡೆದು ದಿನಾಂಕ: 6.5.2006 ರಂದು 5 ಗಂಟೆಯೊಳಗೆ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ (ಪುಷ್ಪಾಭಿವೃದ್ಧಿ ವಿಭಾಗ) ಲಾಲ್‌ಬಾಗ್, ಬೆಂಗಳೂರುರವರಿಗೆ ಅಂಚೆ ಮೂಲಕ ಅಥವಾ ಮುದ್ದಾಂ ತಲುಪಿಸಬೇಕು. ಟೆಂಡರ್‌ಗಳನ್ನು ದಿನಾಂಕ: 8.5.2006 ರಂದು ಬೆಳಿಗ್ಗೆ 11.00 ಗಂಟೆಗೆ ತೆರೆಯಲಾಗುವುದು. ಟೆಂಡರ್ ಫಾರಂಗಳನ್ನು ರೂ.100 (ರೂ.ಒಂದು ನೂರು ಮಾತ್ರ) ಪಾವತಿಸಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ (ಪುಷ್ಪಾಭಿವೃದ್ಧಿ) ಲಾಲ್‌ಬಾಗ್‌ರವರ ಕಛೇರಿಯಿಂದ ಪಡೆಯಬಹುದು. ಟೆಂಡರ್ ಅರ್ಜಿಗಳನ್ನು ವಿತರಿಸಲು ಕೊನೆಯ ದಿನಾಂಕ: 6.5.2006. ಈ ಪ್ರಕ್ರಿಯೆಯಲ್ಲಿ ಟೆಂಡರ್ ಒಪ್ಪಿಗೆಯಾಗದವರ ಭದ್ರತಾ ಹಣವನ್ನು ಹಿಂತಿರುಗಿಸಲಾಗುವುದು. ಹೆಚ್ಚಿನ ವಿವರಗಳಿಗೆ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಪುಷ್ಪಾಭಿವೃದ್ಧಿ) ಲಾಲ್‌ಬಾಗ್‌ರವರನ್ನು ಸಂಪರ್ಕಿಸಬಹುದು.

ದೂರವಾಣಿ: 26573154.

ಪಿ.ಆರ್. 195

ತೋಟಗಾರಿಕೆ ನಿರ್ದೇಶಕರು

## ಪೊಲೀಸ್ ಇಲಾಖೆ

## ಜಿಲ್ಲಾ ಪೊಲೀಸ್ ಕಛೇರಿ, ಹಾಸನ ಜಿಲ್ಲೆ, ಹಾಸನ

**ಅಧಿಸೂಚನೆ ಸಂಖ್ಯೆ: ಪಿಎಂಟಿ:110/2002-03, ದಿನಾಂಕ: 5ನೇ ಏಪ್ರಿಲ್ 2006**

**ವಿಷಯ:** ಹಾಸನ ಜಿಲ್ಲಾ ಪೊಲೀಸ್ ಇಲಾಖೆಯ ಅನುಪಯುಕ್ತ ಬಿಡಿ ಭಾಗಗಳು ಟೈರು, ಟ್ಯೂಬು, ಬ್ಯಾಟರಿಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** ಐಜಿಪಿ ದಕ್ಷಿಣ ವಲಯ, ಮೈಸೂರು ರವರ ಪತ್ರ ಸಂಖ್ಯೆ: ಲೆಕ್ಕ 2 ಪಿಎಂಟಿ/196/2005-06, ದಿನಾಂಕ: 18.01.2006.

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತಿಳಿಯಪಡಿಸುವುದೇನೆಂದರೆ, ದಿನಾಂಕ: 16.05.2006 ರಂದು ಬೆಳಿಗ್ಗೆ 11.00 ಗಂಟೆಗೆ ಸರಿಯಾಗಿ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಕೇಂದ್ರಸ್ಥಳ ಹೊಸಲೈನ್ ರಸ್ತೆ ಹಾಸನದಲ್ಲಿ, ಹಾಸನ ಜಿಲ್ಲಾ ಪೊಲೀಸ್ ಇಲಾಖೆಯ ಈ ಕೆಳಕಂಡ ಅನುಪಯುಕ್ತ ಬಿಡಿಭಾಗಗಳು ಟೈರು, ಟ್ಯೂಬು, ಬ್ಯಾಟರಿಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿಗೊಳಿಸಲಾಗುವುದು. ಸದರಿ ಅನುಪಯುಕ್ತ ವಸ್ತುಗಳನ್ನು ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಕೇಂದ್ರಸ್ಥಾನ ಹೊಸಲೈನ್ ರಸ್ತೆಯಲ್ಲಿ ಹಾಸನದ ಕಛೇರಿಯ ವೇಳೆಯಲ್ಲಿ ನೋಡಲು ಅವಕಾಶವಿರುತ್ತದೆ. ಸದರಿ ವಸ್ತುಗಳ ವಿವರಗಳನ್ನು ಈ ಕೆಳಗೆ ನಮೂದಿಸಲಾಗಿದೆ.

| ಕ್ರ.ಸಂ. | ವಿವರಣೆ | ಅನುಪಯುಕ್ತ ವಸ್ತುಗಳು | |
|---|---|---|---|
| | | 2003-04 | 2004-05 |
| 1 | ನಿರುಪಯುಕ್ತ ಬಿಡಿಭಾಗಗಳು | ಸಂ.1 ರಿಂದ 724 | 1 ರಿಂದ 161 |
| 2 | ಟೈರು ಮತ್ತು ಟ್ಯೂಬು, ಫ್ಲಾಫ್ಸ್ | ಸಂ. 97 | ಸಂ. 77 |
| 3 | ಬ್ಯಾಟರಿಗಳು | ಸಂ. 41 | ಸಂ. 22 |

**ಹರಾಜಿನ ಷರತ್ತುಗಳು ಮತ್ತು ನಿಬಂಧನೆಗಳು**

1) ನಿರುಪಯುಕ್ತ ಬಿಡಿಭಾಗಗಳು, ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಕೇಂದ್ರಸ್ಥಾನ, ಹೊಸಲೈನ್ ರಸ್ತೆಯಲ್ಲಿ ಹಾಲಿ ಯಾವ ಸ್ಥಿತಿಯಲ್ಲಿ ಇದೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು.
2) ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವ ಪ್ರತಿಯೊಬ್ಬರು ರೂ.1000-00 ಠೇವಣಿಯನ್ನು ಹರಾಜಿಗೆ ಮುನ್ನ ನಗದಾಗಿ ಪಾವತಿಸತಕ್ಕದ್ದು. ಠೇವಣಿ ಪಾವತಿಸದೆ ಹರಾಜಿನಲ್ಲಿ ಭಾಗವಹಿಸುವಂತಿಲ್ಲ.
3) ಈ ನಿರುಪಯುಕ್ತ ವಸ್ತುಗಳ ಖರೀದಿಗೆ ಟೆಂಡರುಗಳನ್ನು ಸಲ್ಲಿಸಬಯಸುವ ಆಸಕ್ತ ಸಾರ್ವಜನಿಕರು ರೂ.1000 (ಒಂದು ಸಾವಿರ ರೂಪಾಯಿಗಳು) ಗಳ ಠೇವಣಿ ಹಣವನ್ನು "ಪೊಲೀಸ್ ಸೂಪರಿಂಟೆಂಡೆಂಟ್" "ಹಾಸನ ಜಿಲ್ಲೆ", ಇವರ ನಗದು ಶಾಖೆಯಲ್ಲಿ ನಗದು ತುಂಬಿ ನಿರುಪಯುಕ್ತ ವಾಹನ ಟೈರು, ಟ್ಯೂಬ್, ಬಿಡಿಭಾಗಗಳ ಖರೀದಿಗಾಗಿ ಎಂದು ಸ್ಪಷ್ಟವಾಗಿ ನಮೂದಿಸಿದ ಪಟ್ಟಿ ಮಾಡಲಾದ ಟೆಂಡರ್‌ಗಳನ್ನು ದಿನಾಂಕ: 16.05.2006ರ ಸಂಜೆ 4.00 ಗಂಟೆಯ ಒಳಗಾಗಿ ಈ ಕಛೇರಿಗೆ ತಲುಪುವಂತೆ ಸಲ್ಲಿಸಬೇಕು (ಟೆಂಡರ್ ಫಾರಂ ನಮೂನೆಯಲ್ಲಿ ಈ ಅಧಿಸೂಚನೆಯ ಕೊನೆಯಲ್ಲಿ ಕೊಡಲಾಗಿದೆ)

4) ಟೆಂಡರ್ ಫಾರಂದಲ್ಲಿ ಬಿಡ್ ಮೊತ್ತವನ್ನು ಅಂಕಿ ಮತ್ತು ಅಕ್ಷರದಲ್ಲಿ ಎರಡರಲ್ಲಿಯೂ ಸ್ಪಷ್ಟವಾಗಿ ನಮೂದಿಸಿರಬೇಕು. ಏನಾದರೂ ತಿದ್ದುಪಡಿ ಮಾಡಿದ್ದಲ್ಲಿ, ಟೆಂಡರ್‌ದಾರರು ತಮ್ಮ ಪೂರ್ಣ ಸಹಿ ಮಾಡಿ ತಿದ್ದುಪಡಿಯನ್ನು ದೃಢೀಕರಿಸಬೇಕು. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.

5) ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಬೆಲೆ ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಗಳನ್ನು ಪೊಲೀಸ್ ಸೂಪರಿಂಟೆಂಡೆಂಟ್, ಹಾಸನ ಜಿಲ್ಲೆ ರವರಿಗಾಗಲಿ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯವರಿಗಾಗಲಿ ಸಾರ್ವಜನಿಕರ ಸಮ್ಮುಖದಲ್ಲಿ ಕರೆದು ಬಹಿರಂಗಪಡಿಸುವುದು. ಹರಾಜಿನಲ್ಲಿ ದಾಖಲಾದ ಅತಿ ಹೆಚ್ಚಿನ ಬೆಲೆ ಅಥವಾ ಟೆಂಡರ್‌ನಲ್ಲಿ ದಾಖಲಿಸಿದ ಅತೀ ಹೆಚ್ಚಿನ ಬೆಲೆ ಇವೆರಡರಲ್ಲಿ ಅತೀ ಹೆಚ್ಚಿನ ದರ ದಾಖಲಿಸಿದವರನ್ನು ಯಶಸ್ವಿ ಟೆಂಡರ್ ಬಿಡ್‌ದಾರರೆಂದು ಪರಿಗಣಿಸಲಾಗುವುದು.

6) ಯಶಸ್ವಿಯಾದ ಟೆಂಡರ್:ಬಿಡ್‌ದಾರರು ಅಂಗೀಕೃತ ಹೆಚ್ಚಿನ ಬೆಲೆಯ ಶೇ.25 ರಷ್ಟು (ಠೇವಣಿ ಬಿಟ್ಟು) ಹಣವನ್ನು ಹರಾಜಿನ ಸ್ಥಳದಲ್ಲಿ ಅದೇ ದಿನವೇ ತುಂಬತಕ್ಕದ್ದು. ಈ ಹಣಕ್ಕೆ ಯಾವುದೇ ಬಡ್ಡಿಯನ್ನು ನೀಡಲಾಗದು. ಡೈರಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ಇವರಿಂದ ವಿಲೇವಾರಿ ಒಪ್ಪಿಗೆ ಬಂದ ನಂತರವೇ ಉಳಿದ ಭಾಗವನ್ನು ಬಿಡ್‌ದಾರರಿಂದ ಕಟ್ಟಿಸಿಕೊಂಡು ಬಿಡಿಭಾಗಗಳನ್ನು ವಹಿಸಿಕೊಡಲಾಗುವುದು.

   ಬಿಡಿಭಾಗಗಳನ್ನು ಯಶಸ್ವಿ ಬಿಡ್‌ದಾರರು ತಮ್ಮ ಸ್ವಂತ ಖರ್ಚಿನಲ್ಲಿ ತೆಗೆದುಕೊಂಡು ಹೋಗುವುದು. ತಪ್ಪಿದ್ದಲ್ಲಿ ಅವರು ತುಂಬಿದ 25 ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆಯನ್ನು ಹೊರಡಿಸಿ ಬಿಡಿಭಾಗಗಳನ್ನು ಹರಾಜು ಮಾಡಲಾಗುವುದು.

7) ಯಶಸ್ವಿ ಬಿಡ್‌ದಾರರು ಎಲ್ಲಾ ಹಣವನ್ನು ಪೊಲೀಸ್ ಅಧೀಕ್ಷಕರ ಕಛೇರಿ, ಹಾಸನ ಜಿಲ್ಲೆಯ ನಗದು ಶಾಖೆಯಲ್ಲಿ ನಗದಾಗಿ ತುಂಬುವುದು. ನಿರುಪಯುಕ್ತ ಬಿಡಿಭಾಗಗಳಿಗೆ ಮಾರಾಟ ತೆರಿಗೆಯನ್ನು ಯಶಸ್ವಿ ಬಿಡ್‌ದಾರರಿಂದ ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರ ವಸೂಲಿ ಮಾಡಲಾಗುವುದು.

8) ಹರಾಜಿನಲ್ಲಿ ಭಾಗವಹಿಸುವ ಸಾರ್ವಜನಿಕರು ಇಲಾಖಾ ನಿಯಮಗಳಿಗೆ ಬದ್ಧರಾಗಿರುತ್ತಾರೆ.

9) ಹರಾಜಿನಲ್ಲಿ ಯಾವುದೇ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದು ಮಾಡುವ ಇಲ್ಲವೇ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಹಾಸನ ರವರು ಹೊಂದಿರುತ್ತಾರೆ ಹಾಗೂ ಅವರ ತೀರ್ಮಾನವೇ ಅಂತಿಮವಾದುದು.

10) ಬಹಿರಂಗ ಹರಾಜಿನ ವಿಷಯದಲ್ಲಿ ಯಾವುದೇ ವಾದ ವಿವಾದ ಉಂಟಾದಲ್ಲಿ ಪೊಲೀಸ್ ಅಧೀಕ್ಷಕರು, ಹಾಸನ ರವರು ಮಾಡುವ ನಿರ್ಣಯವೇ ಅಂತಿಮವಾಗಿರುತ್ತದೆ.

11) ಹರಾಜಿನಲ್ಲಿ ಯಶಸ್ವಿಯಾಗದೇ ಇರುವಂತಹ ಸವಾಲುದಾರರ ಠೇವಣಿಯನ್ನು ಹರಾಜು ಮುಗಿದ ನಂತರ ತಕ್ಷಣ ಅವರಿಗೆ ಹಿಂತಿರುಗಿಸಲಾಗುವುದು.

12) ಹರಾಜಿನಲ್ಲಿ ಭಾಗವಹಿಸಲು ಇಚ್ಚಿಸುವವರು ನಿರುಪಯುಕ್ತ ವಸ್ತುಗಳನ್ನು ಕಛೇರಿಯ ವೇಳೆಯಲ್ಲಿ ಡಿಎಆರ್ ಹಾಸನ ಇಲ್ಲಿ ವೀಕ್ಷಿಸಬಹುದು.

13) ಭರ್ತಿ ಮಾಡಿದ ಟೆಂಡರ್ ಫಾರಂಗಳಲ್ಲಿ ಟೆಂಡರ್‌ದಾರರು ತಮ್ಮ ಸಂಪೂರ್ಣ ವಿಳಾಸವನ್ನು ಸ್ಪಷ್ಟವಾಗಿ ನಮೂದಿಸುವುದು.

**ಟೆಂಡರ್ ಫಾರಂನ ನಮೂನೆ**

**ಪೊಲೀಸ್ ವಾಹನಗಳ ನಿರುಪಯುಕ್ತ ಬಿಡಿಭಾಗಗಳು:ಟೈರು, ಟ್ಯೂಬ್, ಬ್ಯಾಟರಿಗಳಿಗಾಗಿ ಟೆಂಡರ್**

ಗೆ,

ಪೊಲೀಸ್ ಅಧೀಕ್ಷಕರು,
ಹಾಸನ ಜಿಲ್ಲೆ, ಹಾಸನ.

ಮಾನ್ಯರೆ,

ತಮ್ಮ ಕಛೇರಿಯ ಟೆಂಡರ್ ಪ್ರಕಟಣೆ ನಂ. ಲೆಕ್ಕ (1) ಪಿಎಂಟಿ 110/02-03, ದಿನಾಂಕ:............... ರಲ್ಲಿ ತಿಳಿಸಿರುವ................. ಸಾಲಿನ ನಿರುಪಯುಕ್ತವಾದ ಬಿಡಿಭಾಗಗಳು:ಟೈರು, ಟ್ಯೂಬ್, ಬ್ಯಾಟರಿಗಳು ರೂ.......................ಗಳಿಗೆ ಖರೀದಿಸಲು ಇಚ್ಚಿಸಿರುತ್ತೇನೆ.

ದಿನಾಂಕ: ತಮ್ಮ ವಿಶ್ವಾಸಿ,

ಸ್ಥಳ: (ಬಿಡ್‌ದಾರರ ಸಹಿ ಮತ್ತು ವಿಳಾಸ)

ಪಿ.ಆರ್. 197 ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ, ಹಾಸನ.

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಕಾರ್ಯನಿರ್ವಾಹಕ ಅಭಿಯಂತರರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ**

**ಟೆಂಡರ್ ಅವಧಿ ವಿಸ್ತರಣೆ (ದ್ವಿಲಕೋಟೆ ಪದ್ಧತಿ)**

**ಕ್ರಮ ಸಂಖ್ಯೆ: ಸನೀವಿ/ಬೆಳಗಾವಿ/ಜೆ.ಇ./ಟೆಂಡರ್/2006-07/947, ದಿನಾಂಕ: 4ನೇ ಏಪ್ರಿಲ್ 2006**

ಈ ಕಾರ್ಯಾಲಯದ ಟೆಂಡರ್ ಪ್ರಕಟಣೆ ಸಂಖ್ಯೆ: ಸನಿವಿ/ಬೆಳಗಾಂವಿ/ಜೀಇ/ಟೆಂಡರ್/05-06/754, ದಿನಾಂಕ: 21.03.2006 ರಲ್ಲಿ ಆಹ್ವಾನಿಸಲಾದ ಟೆಂಡರಿನ ದಿನಾಂಕಗಳನ್ನು ಈ ಕೆಳಗಿನಂತೆ ಮುಂದೂಡಲಾಗಿದೆ.

**ಕಾಮಗಾರಿಯ ವಿವರಣೆ**

**ಕಾಮಗಾರಿ ಹೆಸರು:** 1. **ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾ. ಸಿದ್ನಾಳ ಗ್ರಾಮದ ಹತ್ತಿರ ವೇದಗಂಗಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ**

2. **ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾ. ಬಾರವಾಡ ಗ್ರಾಮದ ಹತ್ತಿರ ದೂಧಗಂಗಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ ನಿರ್ಮಾಣ**

1. ಸದರಿ ಕಾಮಗಾರಿಗಳ ಟೆಂಡರ್ ಫಾರ್ಮಗಳಿಗಾಗಿ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ: **08.05.2006**
2. ಖುಲ್ಲಾ ಟೆಂಡರ್ ಫಾರ್ಮಗಳನ್ನು ನೀಡುವ ದಿನಾಂಕ: **15.05.2006 ರಿಂದ 16.05.2006**
3. ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ: **23.05.2006**

(ಸಾಧ್ಯವಾದಲ್ಲಿ ದಿನಾಂಕ: 25.05.2006 ಟೆಂಡರ್‌ಗಳನ್ನು ತೆರೆಯಲಾಗುವುದು).

**ಬಾಕಿ ಉಪವಿಧಿಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.**

**ಮನೋಹರ ರಾ. ವಡ್ಡರ**

ಪಿ.ಆರ್. 199 ಕಾರ್ಯನಿರ್ವಾಹಕ ಇಂಜಿನೀಯರ್, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.

## ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)
## ಕಾರ್ಯನಿರ್ವಾಹಕ ಅಭಿಯಂತರರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ
## ಟೆಂಡರ್ ಅವಧಿ ವಿಸ್ತರಣೆ (ದ್ವಿಲಕೋಟೆ ಪದ್ಧತಿ)

**ಕ್ರಮ ಸಂಖ್ಯೆ: ಸನೀವಿ/ಬೆಳಗಾವಿ/ಜೆ.ಇ./ಟೆಂಡರ್/2006-07/946, ದಿನಾಂಕ: 4ನೇ ಏಪ್ರಿಲ್ 2006**

ಈ ಕಾರ್ಯಾಲಯದ ಟೆಂಡರ್ ಪ್ರಕಟಣೆ ಸಂಖ್ಯೆ: ಸನೀವಿ/ಬೆಳಗಾವಿ/ಜೆಇ/ಟೆಂಡರ್/05-06/438, ದಿನಾಂಕ: 18.02.2006 ರಲ್ಲಿ ಆಹ್ವಾನಿಸಲಾದ ಟೆಂಡರಿನ ದಿನಾಂಕಗಳನ್ನು ಈ ಕೆಳಗಿನಂತೆ ಮುಂದೂಡಲಾಗಿದೆ.

**ಕಾಮಗಾರಿಯ ವಿವರಣೆ**

**ಕಾಮಗಾರಿ ಹೆಸರು:** **ಬೆಳಗಾವಿ ಜಿಲ್ಲೆಯ ಗೋಕಾಕ ತಾ. ಸಿಂಗಳಾಪೂರ ಗ್ರಾಮದ ಹತ್ತಿರ ಘಟಪ್ರಭಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ**

1. ಸದರಿ ಕಾಮಗಾರಿಗಳ ಟೆಂಡರ್ ಫಾರ್ಮಗಳಿಗಾಗಿ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ: **08.05.2006**
2. ಖುಲ್ಲಾ ಟೆಂಡರ್ ಫಾರ್ಮಗಳನ್ನು ನೀಡುವ ದಿನಾಂಕ: **15.05.2006 ರಿಂದ 16.05.2006**
3. ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ: **23.05.2006**

(ಸಾಧ್ಯವಾದಲ್ಲಿ ದಿನಾಂಕ: 25.05.2006 ಟೆಂಡರ್‌ಗಳನ್ನು ತೆರೆಯಲಾಗುವುದು).

**ಬಾಕಿ ಉಪವಿಧಿಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.**

**ಮನೋಹರ ರಾ. ವಡ್ಡರ**

ಪಿ.ಆರ್. 198 ಕಾರ್ಯನಿರ್ವಾಹಕ ಇಂಜಿನೀಯರ್, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.

## ಉಪ ನಿರ್ದೇಶಕರವರ ಕಛೇರಿ, ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು-89
## ಹಲಸಿನ ಮರ ಮತ್ತು ಮಾವಿನ ಮರಗಳ ಫಸಲಿನ ಹರಾಜು ಇಸ್ತಿಹಾರ್

**ಸಂಖ್ಯೆ: ಕಾನಿ:ಜಾಸಂಕ್ಷೇ:ಸಿ3:ಹ.ಮಾ.ಫಸಲು:ಹರಾಜು:2006-07, ದಿನಾಂಕ: 6ನೇ ಏಪ್ರಿಲ್ 2006**

ಈ ಮೂಲಕ ಸಮಸ್ತ ಜನಗಳಿಗೆ ತಿಳಿಯಪಡಿಸುವುದೇನೆಂದರೆ ಈ ಕ್ಷೇತ್ರದ 2005-06ನೇ ಸಾಲಿನ ಹಲಸಿನ ಮರದ ಫಸಲು - 15 ಮರಗಳಲ್ಲಿ, ಮಾವಿನ ಮರಗಳ ಫಸಲು - 10 ಮರಗಳಲ್ಲಿ ಇವುಗಳನ್ನು ದಿನಾಂಕ: 18.5.2006ರ ಗುರುವಾರ ಬೆಳಿಗ್ಗೆ 11.00 ಗಂಟೆಯ ಮೇಲೆ ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟದ ಈ ಕಛೇರಿ ಆವರಣದಲ್ಲಿ ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಬಹಿರಂಗವಾಗಿ ಹರಾಜು ಮಾಡಲಾಗುವುದು.

**ನಿಬಂಧನೆಗಳು:**

1) ಹರಾಜಿನಲ್ಲಿ ಭಾಗವಹಿಸುವವರು ಹರಾಜಿಗೆ ಮೊದಲು ರೂಪಾಯಿ 1000-00 (ರೂಪಾಯಿ ಒಂದು ಸಾವಿರ ಮಾತ್ರ) ಗಳನ್ನು ನಗದು ರೂಪದಲ್ಲಿ ಹರಾಜು ನಡೆಸುವ ಅಧಿಕಾರಿಗಳಲ್ಲಿ ಮುಂಗಡ ಠೇವಣಿ ಸಂದಾಯ ಮಾಡಿ ಹರಾಜಿನಲ್ಲಿ ಭಾಗವಹಿಸತಕ್ಕದ್ದು.
2) ಹರಾಜಿನಲ್ಲಿ ಯಶಸ್ವಿಯಾಗದವರ ಠೇವಣಿ ಹಣವನ್ನು ಹರಾಜು ಮುಗಿದ ನಂತರ ಹಿಂತಿರುಗಿಸಲಾಗುವುದು.
3) ಹರಾಜು ಮುಗಿದ ಕೂಡಲೆ ಯಶಸ್ವಿ ಹರಾಜುದಾರರು ಹರಾಜಿನ ಪೂರ್ಣ ಮೊಬಲಗನ್ನು ಪಾವತಿ ಮಾಡಿ ರಸೀದಿಯನ್ನು ಪಡೆಯತಕ್ಕದ್ದು ತಪ್ಪಿದಲ್ಲಿ ಠೇವಣಿ ಹಣವನ್ನು ರೆವಿನ್ಯೂ ಬಾಕಿಯೆಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಪುನಃ ಹರಾಜು ಮಾಡಲಾಗುವುದು. ಲಾಭವೇನಾದರೂ ಬಂದಲ್ಲಿ ಹರಾಜುದಾರರು ಅದಕ್ಕೆ ಅರ್ಹರಾಗುವುದಿಲ್ಲ.
4) ಹರಾಜನ್ನು ಇದೇ ಇಲಾಖೆಯ ಆಯುಕ್ತರು ಅಥವಾ ಅವರಿಂದ ನೇಮಿಸಲ್ಪಟ್ಟವರಿಂದ ನಡೆಸಲಾಗುವುದು. ಮತ್ತು ಹರಾಜಿನ ಯಾವ ಬಗೆಯ ಅಂತಿಮ ನಿರ್ಧಾರ ಹರಾಜು ನಡೆಸುವ ಅಧಿಕಾರಿಗಳಿಗೆ ಸೇರಿರುತ್ತದೆ.
5) ಹರಾಜಿನಲ್ಲಿ ಕೊಂಡ ಫಸಲನ್ನು ಎಲ್ಲಾ ವಿಧದಲ್ಲಿಯೂ ಕಾಪಾಡಿಕೊಂಡು ಹೋಗುವ ಜವಾಬ್ದಾರಿಯು ಫಸಲನ್ನು ಕೊಂಡವರಿಗೆ ಸೇರಿರುತ್ತದೆ. ಮತ್ತು ಈ ಬಗ್ಗೆ ಯಾವ ವಿಧವಾದ ದೂರುಗಳನ್ನು ಸ್ವೀಕರಿಸಲಾಗುವುದಿಲ್ಲ. ಹಾಗೂ ಈ ಫಸಲನ್ನು ದಿನಾಂಕ: 31.12.2006 ರವರೆಗೆ ಮಾತ್ರ ಅನುಭವಿಸುವುದಕ್ಕೆ ಅರ್ಹರಾಗಿರುತ್ತಾರೆ.
6) ಸರ್ಕಾರದ ಸ್ವತ್ತಿಗೆ ಯಾವ ವಿಧವಾದ ನಷ್ಟವೇನಾದರೂ ಉಂಟಾದರೆ ಹರಾಜುದಾರರೇ ತಮ್ಮ ಸ್ವಂತ ಖರ್ಚಿನಿಂದ ಸರಿಪಡಿಸಿಕೊಡಬೇಕು.
7) ಹರಾಜಿನಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಿ ನೌಕರರು ಭಾಗವಹಿಸುವಂತಿಲ್ಲ.
8) ಹರಾಜಿನ ಇತರೆ ಮಾಹಿತಿಗಳು ಬೇಕಾದ ಪಕ್ಷದಲ್ಲಿ ಈ ಕಛೇರಿಯ ಎಲ್ಲಾ ಕೆಲಸದ ದಿನಗಳಲ್ಲಿ ಕೇಳಿ ಪಡೆದುಕೊಳ್ಳಬಹುದು.

**ಡಾ: ಎ.ಎಸ್. ರಂಗಸ್ವಾಮಿ**
ಉಪ ನಿರ್ದೇಶಕರು,

ಪಿ.ಆರ್. 200 ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು-89.

## FORM IV
## (See Rule 12)
## NOTICE

It is hereby notified that the undersigned has changed his name from **RAYAPPA NAGAPPA VADDAR** to **RAYAPPA NAGAPPA KANDAGALL**

PD-94 **RAYAPPA NAGAPPA VADDAR**

